# ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ-1993

**ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ-572104.**

ಶೈಕ್ಷಣಿಕ, ಧಾರ್ಮಿಕ ಮತ್ತು ಸಾಮಾಜಿಕವಾಗಿ ಶ್ರೀ ಸಿದ್ಧಗಂಗಾ-ಮಠವು ನಾಡಿನ ಬೃಹತ್ ಸೇವಾಕೇಂದ್ರವಾಗಿದೆ. ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ತಮ್ಮ ಸೇವಾ ಕ್ಷೇತ್ರವನ್ನು ವಿಸ್ತರಿಸಿ ಗ್ರಾಮೀಣ ಜನತೆಗೆ ಸರಳ ಮಾರ್ಗದಲ್ಲಿಜ್ಞಾನಾರ್ಜನೆ ಮಾಡಬೇಕೆಂಬ ಸದುದ್ದೇಶದಿಂದ ಬೋಧಪ್ರದವಾದ ವಸ್ತುಪ್ರದರ್ಶನವನ್ನು ಶ್ರೀ ಮಠದಲ್ಲಿ ಶಿವರಾತ್ರಿ ಜಾತ್ರೆ ಸಂದರ್ಭದಲ್ಲಿ ಕಳೆದ 30 ವರ್ಷಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ.

1993ನೇ ವರ್ಷದಲ್ಲಿ ಜಾತ್ರೆ ಮತ್ತು ವಸ್ತುಪ್ರದರ್ಶನ ಫೆಬ್ರವರಿ 8 ರಿಂದ 22 ವರೆಗೆ ನಡೆಯುವಂತೆ ವ್ಯವಸ್ಥೆ ಮಾಡಲಾಗಿದೆ. ರಾಜ್ಯ ಮತ್ತು ಕೇಂದ್ರ ಸರ್ಕಾರದ ಇಲಾಖೆಗಳು. ಖಾಸಗಿ ಸಂಘ ಸಂಸ್ಥೆಗಳು ಮತ್ತು ಉದ್ದಿಮೆಗಳು ಭಾಗವಹಿಸುತ್ತವೆ. ಪ್ರಸಕ್ತ ಸಮಾಜ ಜೀವನಕ್ಕೆ ಅನ್ವಯಿಸುವಂತೆ ಹೊಸ ದೃಷ್ಟಿಯನ್ನು ಆದರಿಸಿ ಮಳಿಗೆಗಳನ್ನು ಸಿದ್ಧಗೊಳಿಸಲಾಗುತ್ತಿದೆ. ಸಾಮಾನ್ಯ ಜನತೆಗೆ ಜ್ಞಾನ ಜ್ಯೋತಿಯಾಗಿ ಇದು ಬೆಳಕು ನೀಡುತ್ತದೆ.

ವಸ್ತುಪ್ರದರ್ಶದಲ್ಲಿ ಪ್ರತಿನಿತ್ಯ ಸಂಜೆ ಸಂಗೀತ. ನೃತ್ಯ, ನಾಟಕ. ಸಾಂಸ್ಕೃತಿಕ ಹಾಗೂ ಮನರಂಜನಾ ಕಾರ್ಯಕ್ರಮಗಳು ನಡೆಯುತ್ತವೆ.

ರಾಜ್ಯದ ಎಲ್ಲಾ ಜಿಲ್ಲಾ ಕೈಗಾರಿಕಾ ಕೇಂದ್ರಗಳ ಕೈಗಾರಿಕೆಗಳವರು, ಕರಕುಶಲ-ಕರ್ಮಿಗಳು, ಗುಡಿ ಕೈಗಾರಿಕೆಗಳವರು ಮತ್ತು ಖಾಸಗಿ ಉದ್ದಿಮೆದಾರರುಗಳಿಗೆ ಇದೊಂದು ಸುವರ್ಣ ಅವಕಾಶ. ಬಳಕೆಯ ಕೈಗಾರಿಕಾ ವಸ್ತುಗಳು ಮತ್ತು ಕೃಷಿ ಉಪಕರಣಗಳ ಪ್ರದರ್ಶನ ಮತ್ತು ಮಾರಾಟಕ್ಕೂ ಅವಕಾಶವಿರುತ್ತದೆ.

ಮಳಿಗೆಗಳನ್ನು ತೆರೆಯಲು ಮತ್ತು ಉತ್ತಮ ಸಾಂಸ್ಕೃತಿಕ ಕಾರ್ಯಕ್ರಮ ನೀಡಲಿಚ್ಛಿಸುವವರು ವ್ಯವಹರಿಸಲು ಕೋರುತ್ತೇವೆ.

**ಬಿ. ಗಂಗಾಧರಯ್ಯ**

ಕಾರ್ಯದರ್ಶಿ.

# ಸಿದ್ಧಗಂಗಾ

ಸಂಪುಟ-29.　　ಸಂಚಿಕೆ-1.　　ಜನವರಿ-1993.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಆಧಾರ ಚಕ್ರದಲಿ ಆಚಾರ ಲಿಂಗವ
ಸಾಧಾರಗೊಳಿಸಿದ ಶ್ರೀಗುರುವೇ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

××　　××　　××

ಸ್ವಾಧಿಷ್ಠಾನಚಕ್ರ ಗುರುಲಿಂಗಕೆ ನೆಲೆಯಾಗಿ
ಗುರುಲಿಂಗ ಭಕ್ತನ ಬೆಳಗಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

××　　××　　××

ಮಣಿಪೂರಕದಲ್ಲಿ ಶಿವಲಿಂಗವ ನೆಲೆಗೊಳಿಸಿ
ಶಿವಲಿಂಗ ಭಕ್ತನ ಬೆಳಗಿಸಿದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

⁂　+　⁂　÷　⁂

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|

# ಶ್ರೀವಾಣಿ



ಮನುಷ್ಯ ಸೃಷ್ಟಿ ವರ್ಗದಲ್ಲಿ ಶ್ರೇಷ್ಠಜೀವಿ. ಆದರೆ ಅವನಿಂದು ಎಚ್ಚರತಪ್ಪಿ ನಡೆದಿದ್ದಾನೆ. ಅರಿವುಳ್ಳವನಾಗಿ ಬದುಕುವುದೇ ಧರ್ಮ. ಭಾರತೀಯರು "ಮಾನವ"ರಾಗಿ ನಡೆದುಕೊಂಡುದೇ ಜಗತ್ತಿನಲ್ಲಿ ಗೌರವದಿಂದ ಜೀವಿಸುವುದಕ್ಕೆ ಕಾರಣವಾಯಿತು. ಮಹಾವೈರಾಗ್ಯ ಶೀಲರಾದ ಅಲ್ಲಮ ಪ್ರಭುಗಳು 'ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ಅವು ಜಗಕಿಕ್ಕಿದವಿಧಿ ನಿನ್ನೊಡವೆಯೆಂಬುದು ಜ್ಞಾನರತ್ನ ಅಂತಪ್ಪ ಜ್ಞಾನರತ್ನವ ಕೆಡುಗೊಡದೆ ನೀನಲಂಕರಿಸಿದೆಯಾದೊಡೆ ನಿನ್ನಿಂದಧಿಕರಿಲ್ಲ ಕಾಣಾಗುಹೇಶ್ವರ" ಎಂದು ನುಡಿದಿದ್ದಾರೆ. ಮನುಷ್ಯನಿಗೆ ನಿಜವಾದ ಒಡವೆಯೆಂದರೆ ಬೆಳ್ಳಿ ಬಂಗಾರಗಳಿಂದ ಮಾಡಿದ ಆಭರಣಗಳಲ್ಲ, ರೇಷ್ಮೆ ಜರತಾರಿ ಮುಂತಾದ ಬಟ್ಟೆಗಳಲ್ಲ, ಅಧಿಕಾರ ಪದವಿ ಪಟ್ಟಗಳಲ್ಲ-ಜ್ಞಾನ. ಸೂರ್ಯಪ್ರಕಾಶದಂತಹ ಜ್ಞಾನ. ಜ್ಞಾನಿಗಳಾಗಬೇಕೆಂದೇ ನಮ್ಮ ಹಿರಿಯರು ಹಲವಾರು ವರ್ಷ ತಪಸ್ಸು ಮಾಡಿದ್ದುಂಟು. ಯೋಗಸಾಧನೆಗೈದದ್ದುಂಟು. ದೇಶಾಂತರ ಸಂಚಾರ ನಡೆಸಿದ್ದುಂಟು. ಗುರುಪಾದದಡಿಯಲ್ಲಿ ಸೇವೆ ಅರ್ಪಿಸಿದ್ದುಂಟು. ಹಲವು ಹನ್ನೊಂದು ಮಾರ್ಗ ತುಳಿದದ್ದುಂಟು. ವೇದಗಳನ್ನು ಅಭ್ಯಸಿಸಿದ ಋಷಿಗಳು, ಉಪನಿಷತ್‌ಕಾರರು, ವಚನವೇದ ಬರೆದ ಶರಣರು, ದಾಸರು. ಸಂತರು, ಜ್ಞಾನಕ್ಕಾಗಿ ಜೀವನವನ್ನೆಲ್ಲ ಮುಡಿಪಾಗಿಟ್ಟ ಮಹಾನುಭಾವರು. ಅವರು 'ಜ್ಞಾನಿ'ಗಳಾಗುವುದೇ ನಿಜವಾದ ಧರ್ಮವೆಂದು ತಿಳಿದಿದ್ದರು. ಜ್ಞಾನ ಪರಸ್ಪರ ಪ್ರೇಮದಿಂದ ಬಾಳುವ ಕಲೆಯನ್ನು ಕಲಿಸುತ್ತದೆ ಎಂದು ಅವರು ತಿಳಿದಿದ್ದರು. ಮಾನವೀಯತೆಯನ್ನು ಬೋಧಿಸುತ್ತದೆ, ಆಚರಣೆಯಲ್ಲಿಟ್ಟುಕೊಂಡಿರುತ್ತದೆ. ಜ್ಞಾನ ಎಂಬ ಸತ್ಯದರ್ಶಿಗಳಾಗಿದ್ದರು. ಪ್ರಪಂಚ ಮಿಥ್ಯವಲ್ಲ, ಜೀವನ ಸತ್ಯವೆಂದು ನಂಬಿ ನಡೆದರು. ತನ್ನರಿವಿನ ಬೆಳಕಿನಲ್ಲಿ ಬಾಳಪಥವನ್ನು ಸಾಗಿಸುವಲ್ಲಿ ಕಾಯಕ ಶ್ರದ್ಧೆಯನ್ನುಳ್ಳವರಾಗಿದ್ದರು. ಪರಾವಲಂಬನ ಪ್ರಮುಖ ಶತ್ರುವೆಂದೇ ಅವರ ಭಾವನೆ. ದುಡಿಯದೆ ಊಟಮಾಡುವುದೆಂದರೆ ಅವರಿಗೆ ವಿಷಪ್ರಾಶನ ಮಾಡಿದಂತೆ. ತಮ್ಮ ಇಚ್ಛಾಶಕ್ತಿ, ಕ್ರಿಯಾ ಶಕ್ತಿಗಳನ್ನು ತಾವು ಸಂಪಾದಿಸಿದ ಜ್ಞಾನಶಕ್ತಿಯ ಬೆಳಕಿನಲ್ಲಿ ದುಡಿಸಿಕೊಳ್ಳುತ್ತಿದ್ದರು. ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತಿದ್ದರು. ಆದರೆ ಇಂದಿನನಾವುಏನಾಗುತ್ತಿದ್ದೇವೆ ಎಂದು ಯೋಚಿಸಿದಾಗ ಜ್ಞಾನದ ಹೆಸರಿನಲ್ಲಿ ಮಾನವೀಯತೆಯನ್ನು ಕಳೆದುಕೊಳ್ಳುತ್ತಿದ್ದೇವಲ್ಲಾ ಎಂದು ವ್ಯಥೆ ಪಡುವಂತಾಗುತ್ತದೆ. ನಿಜವಾದ ಜ್ಞಾನ ರಾಗದ್ವೇಷಗಳಿಂದ ಮುಕ್ತವಾಗಿರುತ್ತದೆ. ದಯಾಶೀಲ ಅನುಕಂಪ ಪೂರ್ಣವಾಗಿರುತ್ತದೆ. ಬಿದ್ದವನನ್ನು, ಬೀಳುತ್ತಿರುವನನ್ನು, ಬೀಳಲಿರುವನನ್ನು ಕೈಹಿಡಿದು ಎತ್ತುತ್ತದೆ.

## ರೈತ ಬಾಂಧವರಲ್ಲಿ ಮನವಿ

ಈ ವರ್ಷ 'ಸಿದ್ಧಗಂಗೆ' ಜಾತ್ರೆ ಫೆಬ್ರವರಿ 10-22ವರೆಗೆ-ನಡೆಯಲಿದೆ. ಇದೇ ಅವಧಿಯಲ್ಲಿ ಜಾತ್ರಾ ಉತ್ಸವಗಳು ಮತ್ತು ವಸ್ತು ಪ್ರದರ್ಶನ ಪ್ರಾರಂಭವಾಗಿ ಮುಗಿಯುತ್ತವೆ. ಇವುಗಳಲ್ಲಿ ಭಾಗಿಗಳಾಗಿ ಸಂಸ್ಕೃತಿ, ಪರಂಪರೆ, ದೇವರ ದರ್ಶನ ಮತ್ತು ಜ್ಞಾನಾರ್ಜನೆ ಮಾಡಿಕೊಳ್ಳುವ ಸಂಪ್ರದಾಯ ಬೆಳೆಯಬೇಕು. ಪ್ರಯುಕ್ತ ರಾಸುಗಳನ್ನು (ಎತ್ತುಗಳನ್ನು) ಫೆಬ್ರವರಿ 10ರ ಮೇಲ್ಪಟ್ಟು ಜಾತ್ರೆಯಲ್ಲಿ ಸೇರುವಂತೆ ಮಾಡುವುದು ಒಳ್ಳೆಯದು. ಜಾತ್ರೆ ವೈಭವವಾಗಿ ಮುನ್ನಡೆಯಲು ದಯವಿಟ್ಟು ನಿಮ್ಮ ರಾಸುಗಳೊಂದಿಗೆ ಮೇಲೆ ಸೂಚಿಸಿರುವ ಕಾಲಕ್ಕೇ ಬನ್ನಿರಿ.

**ಆಡಳಿತ ಮಂಡಳಿ,**
ಶ್ರೀ ಸಿದ್ಧಗಂಗಾಮಠ.

---

## ಪ್ರಕಟಣೆ

### ಇಷ್ಟಲಿಂಗ ಕಾಂತಿಕಾರ್ಯದ ಉಚಿತ ಶಿಕ್ಷಣ ಶಿಬಿರ

ಪರಮಪೂಜ್ಯ ಶ್ರೀ ಶ್ರೀಗಳವರ ಅನುಗ್ರಹದ ಮೇರೆಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ಇಷ್ಟಲಿಂಗಕ್ಕೆ ಕಾಂತಿಯಿಡುವ ಅಥವಾ ಚಿದ್ರಸವಿಡುವ ವಿಧಾನದ ಉಚಿತ ಶಿಕ್ಷಣ ಶಿಬಿರವನ್ನು ನಿಯೋಜಿಸಲಾಗಿದೆ. ಶಾಸ್ತ್ರೀಯವಾಗಿ ತರಬೇತಿ ಪಡೆದಿರುವ, ಈ ಕಾರ್ಯದಲ್ಲಿ ವಿಶೇಷ ಪರಿಣತಿಯಿರುವ, ಅನುಭವಿಗಳಾದ ಶ್ರೀ ವಿ. ಎಸ್. ಶಿವಲಿಂಗಯ್ಯನವರು ಶಿಬಿರದ ನಿರ್ದೇಶಕರಾಗಿರಲು ಮುಂದೆ ಬಂದಿದ್ದಾರೆ, ಪರಮ ಪೂಜ್ಯರು ಶಿಕ್ಷಣಾರ್ಥಿಗಳಿಗೆ ಉಚಿತ ಊಟ ವಸತಿಗಳನ್ನೇರ್ಪಡಿಸಲು ಆಶೀರ್ವದಿಸಿದ್ದಾರೆ. ಲಿಂಗವಂತ ಧರ್ಮದ ಈ ಪವಿತ್ರಕಾರ್ಯ ಕಣ್ಮರೆಯಾಗಬಾರದೆಂಬ ಮಹೋದ್ದೇಶದಿಂದ ಶಿಬಿರವನ್ನು ಏರ್ಪಡಿಸಲಾಗಿದೆ.

ಆಸಕ್ತಿಯುಳ್ಳವರು ಶಿಬಿರ ನಡೆಯುವ ದಿನಾಂಕ, ಅವಧಿ, ಮತ್ತಿತರ ವಿವರಗಳಿಗೆ ಈ ವಿಳಾಸಕ್ಕೆ ಸಂಪರ್ಕಿಸುವುದು.

ಪರಮಪೂಜ್ಯ
**ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**
ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ.

**ಶ್ರೀ ಎಂ. ಶಿವಸ್ವಾಮಿ**
ಬಸವಕೃಪ, ಕಾಲೇಜು ರಸ್ತೆ
ಟಿ. ನರಸೀಪುರ, ಮೈಸೂರು ಜಿಲ್ಲೆ.

# ಶ್ರೀ ಸಿದ್ಧಲಿಂಗೇಶ್ವರ ವಚನ



ಅಂಗಕ್ಕೆ ಆಚಾರವೆ ಆಶ್ರಯ;
ಆಚಾರಕ್ಕೆ ಪ್ರಾಣವೆ ಆಶ್ರಯ;
ಪ್ರಾಣಕ್ಕೆ ಜ್ಞಾನವೆ ಆಶ್ರಯ;
ಜ್ಞಾನಕ್ಕೆ ಲಿಂಗವೆ ಆಶ್ರಯ;
ಲಿಂಗಕ್ಕೆ ಜಂಗಮವೆ ಆಶ್ರಯ;
ಇಂತೀ ಪಂಚಲಕ್ಷಣ ಪರಿಪೂರ್ಣವಾಗಿ ಬಲ್ಲದೆ ಸದ್ಭಕ್ತನೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ಭಕ್ತನು ಆಚಾರ ವಿಚಾರ ಸಂಪನ್ನನಾಗಿ, ಲಿಂಗ ಜಂಗಮ ನಿಷ್ಠೆಯಿಂದ ಕೂಡಿದವನಾಗಿರಬೇಕು. ಅವನ ಅಂತರಂಗದಲ್ಲಿ ಜ್ಞಾನವು, ಬಹಿರಂಗದಲ್ಲಿ ಕ್ರಿಯೆಯು ಅಳವಟ್ಟಿರಬೇಕು. ಇಲ್ಲದಿದ್ದರೆ ಅವನೆಂದೂ ಭಕ್ತನಾಗನು. ಆಚಾರವು ವಿಚಾರ ಪೂರ್ವಕವಾಗಿಯೂ ವಿಚಾರವು ಆಚಾರ ಪುರಸ್ಸರವಾಗಿಯೂ ಇರಬೇಕಾಗುವುದು. ಇಲ್ಲಿ "ಆಚಾರಃ ಪ್ರಥಮೋ ಧರ್ಮಃ" ಎಂಬ ಅನುಭವೋಕ್ತಿಯನ್ನು ಸ್ಮರಿಸಿಕೊಳ್ಳಬಹುದಾಗಿದೆ, ಆದರೆ ಅಂಗಕ್ಕೆ ಆಚಾರವೇ ಆಶ್ರಯ ಎಂಬುದು ಅದಕ್ಕಿಂತ ಹೆಚ್ಚು ಅರ್ಥ ಪೂರ್ಣವಾಗಿರುವುದು. ಆಶ್ರಿತಕ್ಕೆ ಆಶ್ರಯ ಬೇಕೇ ಬೇಕು. ಆಶ್ರಯವಿಲ್ಲದೆ ಆಶ್ರಿತವಿರುವುದೆಂತು? ಇಲ್ಲಿ ಆಚಾರವು ಬರಿ ಆಶ್ರಯವಲ್ಲ; ಆಶ್ರಿತವೂ ಆಗಿರುವುದು. ಅಂಗಕ್ಕೆ ಆಚಾರವು ಆಶ್ರಯವಾದಂತೆ ಆಚಾರಕ್ಕೆ ಪ್ರಾಣವೇ ಆಶ್ರಯವು. ಪ್ರಾಣವು ಕೂಡ ಕೇವಲ ಆಶ್ರಯವಲ್ಲ; ಅದೂ ಕೂಡ ಜ್ಞಾನವನ್ನು ಆಶ್ರಯಿಸಿರುವುದು. ಜ್ಞಾನವೂ ಕೂಡ ಲಿಂಗವನ್ನೇ ಆಶ್ರಯಿಸಿರುವುದು. ಲಿಂಗವೂ ಜಂಗಮವನ್ನೇ ಆಶ್ರಯಿಸಿರುವುದು. ಜಂಗಮವಿಲ್ಲದಿದ್ದರೆ ಲಿಂಗವಿಲ್ಲ, ಲಿಂಗವಿಲ್ಲದಿದ್ದರೆ ಜ್ಞಾನವಿಲ್ಲ, ಜ್ಞಾನವಿಲ್ಲದಿದ್ದರೆ ಪ್ರಾಣವಿಲ್ಲ, ಪ್ರಾಣವಿಲ್ಲದಿದ್ದರೆ ಆಚಾರವಿಲ್ಲ, ಆಚಾರವಿಲ್ಲದಿದ್ದರೆ ಅಂಗವಿಲ್ಲ. ಹೀಗೆ ಅಂಗವನ್ನು ಹಿಡಿದುಕೊಂಡು ಮಹಾನುಭಾವ ಸ್ವರೂಪವಾದ ಜಂಗಮವನ್ನು ಪಡೆಯಲು ಆಚಾರವು ಎಷ್ಟು ಅಗತ್ಯವೆಂಬುದು ಈ ವಚನದಲ್ಲಿ ಅತ್ಯಂತ ಸ್ಪಷ್ಟವಾಗಿರುವುದು. ಭಕ್ತನಾದವನು ಇಂತಹ ಪಂಚಲಕ್ಷಣ ಪರಿಪೂರ್ಣನಾಗಿರಬೇಕು.

ಕೃಪೆ:- ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ನಿರೂಪಿಸಿದ ಷಟ್‌ಸ್ಥಲ ಜ್ಞಾನಸಾರಾಮೃತ. ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ ಎಡೆಯೂರು-ಗದಗ.

# ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ - 572 104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ್ರೊ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎಸ್. ಚಂದ್ರಶೇಖರಯ್ಯ**

**ಎಂ. ರೇಣುಕಾರಾಧ್ಯ**

* * *

ಜಾಹಿರಾತುವಿಭಾಗ

**ಪಿ. ಬಿ. ಶಂಕರಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00


## ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ. ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


**“ ಸಂಪಾದಕರು ”**

**‘ಸಿದ್ಧಗಂಗಾ’ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯಂ

ನಿಮ್ಮ 'ಸಿದ್ಧಗಂಗಾ'ಕ್ಕೆ ಇಪ್ಪತ್ತೆಂಟು ವರ್ಷ ತುಂಬಿದುವು ಈ ಸಂಚಿಕೆಯೊಂದಿಗೆ ಇಪ್ಪತ್ತೊಂಬತಕ್ಕೆ ಪಾದಾರ್ಪಣ ಮಾಡುತ್ತಿದೆ. ಪತ್ರಿಕೆ ವಾಣಿಜ್ಯ ಸ್ವರೂಪದ್ದಲ್ಲ ವೆಂಬುದನ್ನು ನೀವು ಬಲ್ಲಿರಿ. ಶ್ರೀ ಮಠದ ಸೇವಾ ಮುಖಗಳಲ್ಲೊಂದೆಂಬುದನ್ನು ನಮ್ರವಾಗಿ ನಿಮ್ಮ ಗಮನಕ್ಕೆ ತರುತ್ತಲೇ ಬಂದಿದ್ದೇವೆ. ತ್ರೈಮಾಸಿಕವಾಗಿ ಆರಂಭವಾಗಿ, ಮಾಸಿಕವಾಗಿ ಪರಿವರ್ತನೆ ಗೊಂಡು ನಡೆದು ಬರುತ್ತಿದೆ. 'ಸಿದ್ಧಗಂಗಾ' ಪತ್ರಿಕೆಯ ಯಶಸ್ಸಿಗೆ ನಿಮ್ಮ ಅಭಿಮಾನ ಹಾಗೂ ಶ್ರೀ ಮಠದ ಪರಮ ಪೂಜ್ಯರ ಶ್ರೀ ರಕ್ಷೆಯೇ ಕಾರಣ. ಸಹೃದಯರಾದ ಲೇಖಕರ ಸಹಕಾರ, ಜಾಹಿರಾತುದಾರರ ಪ್ರೋತ್ಸಾಹ, ಆಜೀವ ಸದಸ್ಯರ ಉತ್ತೇಜನ, ಚಂದಾದಾರರ ಬೆಂಬಲ; ಮುದ್ರಣಾಲಯ ದವರ ಸಕಾಲಿಕ ಸಹಕಾರ, ಪತ್ರಿಕೆಯ ಪ್ರಸಾರ ಮಣಿಹದಲ್ಲಿ ಸದ್ದಿಲ್ಲದೆ ಸೇವೆ ಗೈಯುತ್ತಿರುವುದನ್ನು ಸ್ಮರಿಸಲು ಸಂತೋಷವಾಗುತ್ತದೆ. ಶ್ರೀಮಠದ ಮುಖವಾಣಿಯಾಗಿ ಪ್ರಕಟನಾಗುತ್ತಿರುವ 'ಸಿದ್ಧಗಂಗಾ' ಕೆಲವು ಧ್ಯೇಯ ಧೋರಣೆಗಳನ್ನು ರೂಪಿಸಿಕೊಂಡಿದೆ. ಯಾವ ಸಂದರ್ಭದಲ್ಲಿಯೂ 'ವಿವಾದಾಸ್ಪದ'ಕ್ಕೆ ಒಳಗಾಗದಂತೆ ಪ್ರಕಟಣಾ ಸೇವೆಸಲ್ಲಿಸುವ ಗುರಿಯನ್ನುಳ್ಳ ದ್ದಾಗಿದೆ. ನಾಡಿನುದ್ದಗಲದಲ್ಲಿರುವ ಮಠಮಾನ್ಯಗಳಿಂದ, ಸೇವಾ ಸಂಸ್ಥೆಗಳಿಂದ ಪ್ರಕಟವಾಗುತ್ತಿರುವ ಪತ್ರಿಕೆಗಳೊಂದಿಗೆ ಹೊರಬರುತ್ತಿರುವುದಾದರೂ ಸ್ಪರ್ಧಾ ಮನೋಭಾವನೆಯಿಂದ ಮುಕ್ತವಾಗಿದೆ. ಆದರೆ ಉತ್ತಮವಾಗಿ, ಸಂದರವಾಗಿ ಪ್ರಕಟವಾಗಬೇಕೆಂಬ ಹಂಬಲ ಉಳ್ಳದ್ದಾಗಿದೆ. ಸದಾ ಶ್ರೀ ಮಠದ ಸೇವಾ ದೃಷ್ಟಿ ಧ್ಯೇಯಗಳನ್ನು ಜಾಗೃತವಾಗಿ ಅನುಸರಿಸುತ್ತ ಬರುಲಿತ್ತದೆ. ಶ್ರೀ ಸಿದ್ಧಗಂಗಾ ಮಠದ ಸೇವೆ ಕವಿವಾಣಿಯಲ್ಲಿ ದಾಖಲಿಸುವುದಾದರೆ "ಸದ್ದು ಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ; ಕಾಯಕವೆ ಕೈಲಾಸವೆಂಬುವ ಮಾತು ಕೃತಿಯೊಳು ಮೂಡಿದೆ." ಪತ್ರಿಕೆಯೂ ಆದಾರಿಯನ್ನೇ ಕ್ರಮಿಸುತ್ತಿದೆ

1992 ಮುಗಿಯಿತು. ಅನೇಕ ಸಮಸ್ಯೆಗಳನ್ನು, ಸಂಕಷ್ಟಗಳನ್ನು ಸೃಷ್ಟಿಸಿ ಹೋಯಿತು. ಭಾರತೀಯರ ಪವಿತ್ರ ಮನಸ್ಸು ಒಡೆಯುವಂಥ ಘಟನೆಯು ಕಪ್ಪು ಅಧ್ಯಾಯವನ್ನು ಬರೆಯಿತು. ಮಂದಿರ-ಮಸೀದಿಗಳ ಹೆಸರಿನಲ್ಲಿ ಮಾರಣ ಹೋಮವಾಯಿತು. ಬಸವಾದಿ ಶರಣರು ತೋರಿದ ಶಿವಪಥದತ್ತ ದೃಷ್ಟಿಹರಿಸದಂತಾಯಿತು. ಮಂದಿರ-ಮಸೀದಿಗಳಲ್ಲಿ ದೇವರನ್ನು ಕಾಣ ಹೊರಟು ಭಾರತೀಯ ಭೂಮ ಭವ್ಯ ದಿವ್ಯ ದರ್ಶನವನ್ನೇ ಮರೆತು ಬಿಟ್ಟಿತು. ದೇವರು ಸರ್ವಾಂತರ್ಯಾಮಿ, ಸರ್ವವ್ಯಾಪಿ ಎಂಬುದನ್ನು ಗಮನಿಸದೆ" 'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲಪಾದ'ವನ್ನು ಅರಿಯದೇ ಸರಿದಾಡುವಂತಾಯಿತು. ಶಿವರಾಮಕಾರಂತರು ಒಂದು ಕಡೆ ಹೇಳುವಂತೆ "ನಾವು ದೊಡ್ಡವರಾಗದ ತನಕ ನಮ್ಮ ದೇವರು ದೊಡ್ಡವನಾಗಲಾರ" ಎಂಬುದನ್ನು ಸ್ಪಷ್ಟಗೊಳಿಸಿತು. "ನಮ್ಮ ಅಳತೆಯನ್ನು ಮೀರಲಾರದ ದೇವರು" ಎಂಬ ಕಾರಂತರ ವಿಚಾರವಾಣಿ ಸತ್ಯವಾಯಿತು. ಇನ್ನೊಂದು ಅತಿವೃಷ್ಟಿಯ ಭೀಕರ ದುರಂತದಿಂದಾಗಿ ರಾಜ್ಯ ತಲ್ಲಣಿಸಿ ಬಿಟ್ಟಿತು. ಮನೆಮಠ ಜೀವ ಕಳೆದುಕೊಂಡ ನತದೃಷ್ಟರು ಸಾವಿರ ಸಾವಿರವಾಯಿತು. ಸರ್ಕಾರ ಸಮಾಜ ಪರಿಹಾರ ಕಾರ್ಯದಲ್ಲಿ ಸಮರ ದೋಪಾದಿಯಲ್ಲಿ ಸೆಣಸಿದುವು. ಪ್ರತಿಭಾವಂತ ಕಲಾವಿದರು ನಾಯಕರು ನಮ್ಮನ್ನಗಲಿದರು. ಅನೇಕ ರಾಜ್ಯಗಳ ಸರ್ಕಾರಗಳು ಬಿದ್ದು ಹೋದವು, ಕೆಲವು ರಾಜ್ಯಗಳ ನಾಯಕತ್ವ ಬದಲಾಯಿತು. ಎಲ್ಲಕ್ಕಿಂತ ಹೆಚ್ಚಿನದಾಗಿ ಜೀವನಾವಶ್ಯಕ ವಸ್ತುಗಳ ಧಾರಣೆ ಹೆಚ್ಚಾಗುತ್ತಲೇ ಬಂತು. ಸಾವಿರ ಸಂಖ್ಯೆಯ ಸಂಬಳದಾರರೂ ಮೂಕ ವೇದನೆ ಅನುಭವಿಸುವಸ್ಥಿತಿ ಸೃಷ್ಟಿಯಾಯಿತು. ಇಷ್ಟಾದರೂ ನಮ್ಮನ್ನಾಳುವ ನಾಯಕರು 'ಬಣ್ಣದ ಮಾತುಗಳಿಂದಲೇ ಭಾರತವನ್ನು ಸಮೃದ್ಧ ಶ್ರೀಮಂತ ರಾಷ್ಟ್ರವನ್ನಾಗಿಸುವ 'ಗೀಳಿ' ನಿಂದ ಮುಕ್ತರಾದುದು ಕಾಣಬರಲಿಲ್ಲ.

1993 ರಲ್ಲಾದರೂ ಪ್ರಾಚೀನ ಪರಂಪರೆಯಲ್ಲಿ ಕಾಣ ಬಂದ ಶಿವಾಂಶಗಳನ್ನೆಲ್ಲ ಕ್ರೋಢೀಕರಿಸಿಕೊಳ್ಳುತ್ತ "ಸರ್ವೇಜನಾಃ ಸುಖಿನೋ ಭವಂತು" ಎಂಬ 'ಶಿವಪಥ'ದ ಕಡೆಗೆ ನಡೆಯುವಂತಾಗಲಿ ಎಂದು "ಸಿದ್ಧಗಂಗಾ" ಶುಭಾಶಯಗಳನ್ನು ಕೋರುತ್ತದೆ.

# ನೆನಪಿನ ಕಾಣಿಕೆ

–ಜಡೆರಂಗರಾವ್, "ಶೃತಿ" 306, H.I.G. BHEL, 'Echos',
ರಾಮಚಂದ್ರಪುರಂ, ಹೈದ್ರಾಬಾದ್.

20ನೇ ದಶಕ, ನಾನಾಗ ಭೌತಶಾಸ್ತ್ರ, ರಸಾಯನಶಾಸ್ತ್ರಗಳ ಅಧ್ಯಯನದ ಬಿ.ಎ. ಓದುತ್ತಿದ್ದೆ. ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ ಎಂದು ಒತ್ತಿಹೇಳುತ್ತೇನೆ; ಏಕೆಂದರೆ ಹೆಸರಿಗೆ ಮಾತ್ರ ಓದು ಓದಿಗಿಂತ ಆಟಕ್ಕೇ-ಟೆನ್ನಿಸ್‌ಗೇ-ಹೆಚ್ಚು ಗಮನ. ಅದರಲ್ಲಿ ಅವರಿಗೆ ಹೆಚ್ಚು ಪ್ರಾವೀಣ್ಯವಿಲ್ಲದಿದ್ದರೂ, ಆ ಆಟ ಆಡುವಾಗ ನಾನು ಕಿಚ್ಚಿನಿಂದ, ಶ್ರದ್ಧೆಯಿಂದ (Concentration & determination) ಆಡುವುದನ್ನು ಗಮನಿಸಿ ಪ್ರೋತ್ಸಾಹಿಸಿದವರು ನನ್ನ ತಂದೆ. ಅವರ ಊಹೆ ಸುಳ್ಳಾಗಲಿಲ್ಲ. ನನಗೆ ಮೊದಲ ಕೀರ್ತಿ ದೊರೆತದ್ದು ತುಮಕೂರಿನಲ್ಲಿ. ಅಲ್ಲಿನ ಅಗ್ರ ಶ್ರೇಯಾಂಕದ ಆಟಗಾರರನ್ನು ಸೋಲಿಸಿ ಛಾಂಪಿಯನ್ ಆದೆ ಕಪ್ ಗೆದ್ದೆ. ಆದುದರಿಂದ ಟೆನ್ನಿಸ್‌ಗೆ ಹೆಸರುವಾಸಿಯಾಗಿದ್ದ ಸೆಂಟ್ರಲ್ ಕಾಲೇಜ್ ಛಾಂಪಿಯನ್ ಆಗ ಬೇಕೆಂಬಾಶೆ ಬೇರೂರಿತು.

ಭೌತ ಶಾಸ್ತ್ರದ Practicals ಸಂಜೆ 3 ರಿಂದ 5. ಎಂತಹ ಬಿಕ್ಕಟ್ಟು, ಇಲ್ಲಿ Practicals ಮಾಡಬೇಕು. ಆದರೆ ಟೆನ್ನಿಸ್ ನನ್ನನ್ನಾಹ್ವಾನಿಸುತ್ತಿತ್ತು. ಇದಕ್ಕೆ ದಾರಿ ಕಾಣದಾದೆ.

ಈ Practicals ಮಾಡಬೇಕಾದವರನ್ನು ಇಬ್ಬರಂತೆ ಜೋಡಿ ಮಾಡಿದ್ದರು. ನನ್ನೊಡ ಗುಂಪಿನವರು ಸಾಧಾರಣ ಎತ್ತರದ ವ್ಯಕ್ತಿ. ತಲೆಗೊಂದು ಟೋಪಿ; ಸಾಧಾರಣದಕೋಟು ಹಣೆಯಲ್ಲಿ ಮೂರು ಬಟ್ಟು ವಿಭೂತಿಯ ವಿಚಿತ್ರದ ಹುಡುಗರು. ಬಡತನವೋ ವೈರಾಗ್ಯವೋ ಏನೂ ಹೇಳಲು ಬರುವಂತಿರಲಿಲ್ಲ. ಆದರೆ ಕೆಲಸದಲ್ಲಿ ಅಚ್ಚುಕಟ್ಟು; ಓದಿನಲ್ಲಿ ಏಕಾಗ್ರತೆ, ಇದರಿಂದ ನನಗನುಕೂಲವಾಯಿತು. "ಮೇಟ್ (Bench mate) ನನ್ನ ರಿಕಾರ್ಡಿನಲ್ಲೂ ಫಲಿತಾಂಶ ಬರಿದು ಬಿಡಿಯಪ್ಪ Please. ನಾನು ನಾಳಿನ ಮ್ಯಾಚಿಗಾಗಿ Pratice ಮಾಡಬೇಕಾಗಿದೆ." ಎಂದು ಇಂತಹ ಸಬೂಬುಗಳನ್ನು ಹೇಳಿ ಹೊರಟು ಬಿಡುತ್ತಿದ್ದೆ. "ರಂಗರಾಯರೆ, ಈ ಆಟಗಳಲ್ಲಿ ನೀವು ನಮ್ಮ ಕಾಲೇಜಿಗೆ ಕೀರ್ತಿತರುತ್ತೀರೆಂಬ ಹೆಮ್ಮೆ ನನಗೂ ಇದೆ. ಆದರೆ ಇಲ್ಲಿಗೆ ಬಂದಿರುವುದು ಮೊದಲು ವಿದ್ಯೆ; ನಂತರ ಇತರವು. ಹೀಗೆ ಹೇಳುತ್ತಿದ್ದೇನೆಂದು ತಪ್ಪು ತಿಳಿಯಬೇಡಿ Mate. ನಿಮಗೆ ಖಂಡಿತ ಸಹಾಯ ಮಾಡುತ್ತೇನೆ" ಎಂದೆಲ್ಲಾ ಹೇಳುತ್ತಿದ್ದರೂ "Thank you Thank you, Surely you are right" ಎಂದು ಹೇಳಿ ಹೊರಟೇ ಬಿಡುತ್ತಿದ್ದೆ, ಫಲಿತಾಂಶ: ಟೆನ್ನಿಸ್‌ನ ಶಿಖರಕ್ಕೆ ಏರುತ್ತಿದ್ದೆ. Final B.A.ನಲ್ಲಿ ನಪಾಸ್-ಆವರ್ಷ !

50ರ ದಶಕ. ಓದು ಮುಗಿಸಿ, ಅಲ್ಲಲ್ಲಿ ಎಲ್ಲಿಡೆ ಕೆಲಸ ಮಾಡಿ, ಉ. ಹಿಂದೂಸ್ಥಾನದಲ್ಲಿದ್ದಾಗ 1947ರ ಗಲಾಟೆಯಲ್ಲಿ ಎಲ್ಲಾ ಕಳೆದುಕೊಂಡು ನಿರ್ಗತಿಕನಾಗಿ ಬಂದು ಹೊಸಪೇಟೆ ತಲ್ಪಿದೆ. ಕಾರ್ಖಾನೆಗಳಲ್ಲಿ ಅಧಿಕಾರಿಯಾಗಿ ಕೆಲಸ ಮಾಡಿದ ನಾನು ಉಪಾಧ್ಯಾಯನಾದೆ, ಇಲ್ಲಿನ ಪ್ರಾಢಶಾಲೆಯಲ್ಲಿ ಸಹ ಧರ್ಮಿಣಿ ಶಾರದಾ ಜಡೆಯವರೂ ಬಾಲಕಿಯರ ಪ್ರೌಢಶಾಲೆಯಲ್ಲಿ ಉಪಾಧ್ಯಾಯಿನಿ, ಸಂಸಾರ ರಥ-ಜರುಗಬೇಕಷ್ಟೆ ? ಒಂದು ದಿನ ಮಾಮೂಲಿನಂತೆ ಹೆಗಲಿಗೊಂದು ಚೀಲ ತಗುಲಿಸಿ-ಕೊಂಡು ಪೇಟೆಗೆ ಹೋಟೆ. 'ಸಾರ್ ಸಾರ್' ಎಂದಾರೋ ಕರೆದರು, ತಿರುಗಿನೋಡಿದರೆ ಚಿಕ್ಕಾಡಿಗಿಯ ಹಿರಿಯೊಬ್ಬರು ಕರೆಯುತ್ತಿದ್ದಾರೆ. ನನ್ನನ್ನೋ ಇನ್ನಾರನ್ನೋ ಎಂದು ಅನುಮಾನಿಸಿ ಸುತ್ತಲೂ ನೋಡತೊಡಗಿದೆ. 'ನಿಮ್ಮನ್ನೇ ಸಾರ್" ಎಂದು ಹತ್ತಿರ ಬಂದು 'ಸ್ವಾಮಿಗಳು ಕರೆಯುತ್ತಿದ್ದಾರೆ' ಎಂದರು. Petrol Bunk ಬಳಿನಿಂತಿದ್ದ ಕಾರಿನಲ್ಲಿ ವಿಭೂತಿಧಾರಿ ಸ್ವಾಮಿಗಳೊಬ್ಬರು ಕುಳಿತಿದ್ದರು. ನನಗೆ ಯಾವ ಸ್ವಾಮಿಗಳ ಪರಿಚಯವೂ ಇಲ್ಲ, ಹಾಗಾಗಿ "ರೀ, ನನ್ನನಿರಲಾರದು. ತಪ್ಪುತಿಳಿದಿದ್ದೀರಿ" ಎಂದೆ, 'ಇಲ್ಲಾಸಾರ್, ತಮ್ಮನ್ನೇ ರಂಗರಾಯರನ್ನು ಬರಹೇಳಿ ಎಂದರು' ಎಂದರು. ಅರೆ ನನ್ನ ಹೆಸರನ್ನು ಹಿಡಿದ ಕರೆವ ಈ ಸ್ವಾಮಿಗಳಾರಪ್ಪ, ಎಂದು ಅನುಮಾನಿಸುತ್ತಲೇ ಹೋದೆ "ಆರೋಗ್ಯವೆ? ರಂಗರಾಯರೆ, ಚೆನ್ನಾಗಿದ್ದೀರಾ? ಎಂದು ಅವರೇ ಮೊದಲು ಮಾತನಾಡಿದರು, ನಮಸ್ಕರಿಸಿದೆ. 'ಕ್ಷಮಿಸಬೇಕು. ತಮ್ಮಪರಿಚಯ ಏಕೋಮರೆತು ಹೋಗಿದೆ "ಎಂದೆ" ಸಹಜವೇ ಎಂದು ಮುಗಳ್ನಕ್ಕು ನಾನು ಭೌತಶಾಸ್ತ್ರದ Practicalsನ ನಿಮ್ಮ Mate ಶಿವಣ್ಣ" ಎಂದಾಗ ಬೆಚ್ಚಬಿದ್ದು ನೋಡಿದೆ. ಅವರೇ ಮಾತು ಮುಂದುವರಿಸಿದರು ಗುರುಗಳಾಣತಿಯಂತೆ ನಾನು ಶ್ರೀ ಸಿದ್ಧಗಂಗಾ ಮಠದ ಪೀಠಸ್ಥನಾದೆ. ಆಗಿನ ವಿದ್ಯಾರ್ಥಿ ಜೀವನದ ನಂತರ ನಮ್ಮ ನಿಮ್ಮ ಭೇಟಿಯೇ ಆಗಿರಲಿಲ್ಲ. ಈದಿನ ಆಕಸ್ಮಾತ್ ನಿಮ್ಮನ್ನು ಕಂಡು "ಅವರು ರಂಗರಾಯರಲ್ಲವೆ ? ಎಂದು ಕೇಳಿ ಇವರು ಹೌದೆಂದಾಗ ನಿಮ್ಮನ್ನು ಕರೆಸಿದೆ. ಹಳೆಯ ಸ್ನೇಹಿತರ ಭೇಟಿ ಇಂದ ತುಂಬಾ ಸಂತೋಷವಾಯಿತು" ಎಂದರು ಕಾರು ಚಲಿಸಿತು. ನಾನು ನಮಸ್ಕರಿಸಿದೆ. ಆ ಕಾರು ಹೋಗುವುದನ್ನೇ ನೋಡುತ್ತಾನಿಂತೆ. ಎಂತಹ ಹೃದಯವಂತಿಕೆ !

ಸ್ಮೃತಿ ಪಟಲದ ಮೇಲೆ ಇಂತಹ ಇನ್ನಿಬ್ಬರ ಚಿತ್ರ ಮೂಡಿತು.

ನಮ್ಮ ತಂದೆಯುವರಿಂದ ಕಾಗದ ಬಂತು. ನಾನಾಗ ಕಾಲೇಜ್‌ನಲ್ಲಿದ್ದೆ

ರಂಗಣ್ಣಾ,

ಈ ದಿನ ನಸುಕಿನಲ್ಲಿ ತೋಟದಲ್ಲಿ ನಾನು ಹೂ ಬಿಡಿಸುತ್ತಿರುವಾಗ ಕೆಂಪು ಶಾಲು ಹೊದ್ದ ಹಿರಿಯರೊಬ್ಬರು ಮನೆಯ ಬಳಿ ಬಂದು "ತಾವು ಜಡೆ, ರಾಮ-ರಾಯರೇ" ಎಂದು ಕೇಳಿದರು. "ಹೌದು ಒಳಗೆ ದಯಮಾಡಿಸಿ" ಎಂದಾಗ "ಚಿಂತೆ

ಇಲ್ಲ. ರಂಗರಾಯರು ನಿಮ್ಮ ಚಿರಂಜೀವಿಯೋ" ಎಂದು ಕೇಳಿದರು. ನೀನು ಯಾವುದೋ ತೊಂದರೆಯಲ್ಲಿ ಸಿಕ್ಕಿಹಾಕಿ ಕೊಂಡಿರಬಹುದೆಂದು ಊಹಿಸಿದೆ. ಆದರೆ ತೋರಗೊಡದೆ "ಹೌದೆಂದೆ". ಈಗ ಕೆಲವು ವರ್ಷಗಳಹಿಂದೆ Tagore 'Run Away' ಎಂಬ ಕತೆಯನ್ನು 'ಓಡಿ ಹೋದ ಬಾಲಕ' ಎಂದು ಅನುವಾದಿಸಿ ಜಯಕರ್ಣಾಟಕಕ್ಕೆ ಕಳಿಸಿದ್ದರು. ಅದು ಈಗ ಪ್ರಕಟವಾಗಿದೆ. ಅನುವಾದ ಚೆನ್ನಾಗಿದೆ. ಶೈಲಿ ಇದೆ. ಬರೆಯುವ ಆಶೆ ಇದ್ದ ಹಾಗಿದೆ, ಸಂತೋಷ. ಅವರಿಗೆ ಸ್ವಂತ ಲೇಖನಗಳನ್ನು ಬರೆಯಲು ತಿಳಿಸಿ, ನಾನು ಬರುತ್ತೇನೆ ಎಂದು ಹೊರಡಲನುವಾದರು. ತಾವು?- –ನಾನು "ಆಲೂರು ವೆಂಕಟರಾಯ"

ನಾನಾಗ ಮಂಡ್ಯ ಸಕ್ಕರೆ ಕಾರ್ಖಾನೆಯಲ್ಲಿದ್ದೆ. ಸಣ್ಣ ಮನೆಯೊಂದರಲ್ಲಿವಾಸ. ಒಂದು ದಿನ ಸುಮಾರು 7ರ ವೇಳೆಗೆ, ಕಾರೊಂದು ಮನೆ ಎದುರಿಗೆ ನಿಂತು ಜರೀ ಪೇಟದ ಸೂಟು ಹಾಕಿದ ವ್ಯಕ್ತಿಯೊಬ್ಬರು ಇಳಿದರು. ಕಾರು ನೋಡಿ ಬೆಚ್ಚಿದ ನಾನು ಯಾರೋ ತಪ್ಪಾಗಿ ಬಂದಿರಬೇಕೆಂದು ವಿಚಾರಿಸಲು ಅವರ ಬಳಿ ಹೋದೆ. "ತಾವು ರಂಗರಾಯರಲ್ಲವೆ" ಎಂದು ಬಹಳ ಆತ್ಮೀಯತೆಯಿಂದ ಬೆನ್ನು ಚಪ್ಪರಿಸುತ್ತಾ "ರಘು" ಎಂತ ಅಂಕಿತ ನಾಮದಲ್ಲಿ ಬರೆದ ನಿಮ್ಮ ಕತೆ ಸಂಕಲನ ಕೈ ಸೇರಿತು. ಚೆನ್ನಾಗಿ ಬರೆಯುತ್ತೀರಿ. ಬರವಣಿಗೆ ನಿಲ್ಲಿಸಬೇಡಿ. ಚಿಕ್ಕ ವಯಸ್ಸಿನಲ್ಲೇ ಸಾಹಿತ್ಯ ಸೇವೆಗೆ ಟೊಂಕಕಟ್ಟೇದ್ದೀರಿ. ಬಹಳ ಸಂತೋಷ, ಮೈಸೂರಿಗೆ ಹೊರಟಿದ್ದೆ; ಮಂಡ್ಯ ಬಂದು ನಿಮ್ಮನ್ನು ಜ್ಞಾಪಿಸಿತು ಕಂಡು ಸಂತೋಷವಾಯಿತಪ್ಪಾ, ಏನಾದರೂ ಬರವಣಿಗೆ ನಿಲ್ಲಿಸಬೇಡಿ. ಬರಲೇ? ಎಂದು ಕಾರುಹತ್ತಿದರು. "ತಾವು"? ಎನ್ನುವಷ್ಟರಲ್ಲಿಯೇ, ಇನ್ನೊಮ್ಮೆ ಬಂದು ಕುಳಿತು ಸಾವಕಾಶವಾಗಿ ಮಾತನಾಡೋಣ ಯೋಚಿಸಬೇಡಿ. ನಾನು ಮಾಸ್ತಿ ವೆಂಕಟೇಶ ಐಯ್ಯಂಗಾರ್ ಎಂದು ಹೇಳಿ ಹೊರಟೇ ಹೋದರು.

ಇಂತಹ ತ್ರಿಮೂರ್ತಿಗಳ ಮುಂದೆ ನಾವ್ಯಾರು? ಹಿಮಾಲಯಕ್ಕೆ ನಮ್ಮೂರಿನ ಜೋಳದ ರಾಶಿ ಗುಡ್ಡದಂತೆ, ಎಂತಹ ಉದ್ದಾತ್ತ ಹೃದಯವಂತಿಕೆ. "ಸರಳತೆ" ಇವರ ಮುಂದೆ ನಾಚಬೇಕು; ಡಿ.ವಿ.ಜಿ. ಯವರ ಕವನದಂತೆ

ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು ನಿಜ ಸೌರಭವ ಸೂಸಿ ದೀನತೆಯ ತೋರಿ, ಅಭಿಮಾನವನು ತೊರೆದು ಕೃತಕೃತ್ಯಕೆಯ ಪಡೆವಂತೆ...... ವಿಪುಲಾಶ್ರಯವ ನೀವ ಸುಫಲ ಸುಮಭರಿತ ಪಾದಪದಂತೆ"

ಎಷ್ಟು ನಿಜ. ಸ್ವಾಮಿಗಳ ಸೌಜನ್ಯ, ವಿನಯ, ವಿದ್ಯಾದಾನ ಒಂದೇ ಎರಡೇ....... !

ನಮೋ ನಮೋ.

# "ಶಿಲ್ಪದ ಸಿರಿ"

"ಕವಿತಾಕೃಷ್ಣ" ಕ್ಯಾತ್ಸಂದ್ರ, ತುಮಕೂರು-4.

ನೋಡು ಬಾ ಕನ್ನಡಿಗ ಕರುನಾಡ ವೈಭವವ
ಹಾಡು ಬಾ ಕರುನಾಡ ಸಿರಿ ಶಿಲ್ಪದ ಗೀತವ ||ಪ||

ವಿಜಯ ವಿದ್ಯಾರಣ್ಯ ಕಟ್ಟಿದಂತ ನಾಡಿದು
ವೇದಮೂರ್ತಿ ಸಾಯಣರು ಹರಿಸಿದಂತ ಬೀಡಿದು
ವೀರಪುರುಷ ಹಕ್ಕ-ಬುಕ್ಕ ಆಳಿದಂತ ನಾಡಿದು
ಹಂಪೆ ಮೂರ್ತಿ ಪಂಪಾಪತಿ ನೆಲಸಿದಂತ ಗುಡಿಯಿದು||

ಕಲ್ಲರಳಿ ಕಲೆಯಾಯ್ತು ಹಿಡಿಮಣ್ಣು ಹೊನ್ನಾಯ್ತು
ವಿಜಯನಗರ ಕರುನಾಡ ಹೃದಯವೇ ತಾನಾಯ್ತು
ಹಾದಿಯಲ್ಲಿ ಸಾಲುಗಟ್ಟಿ ಮುತ್ತುರತ್ನ ಮಾರಾಯ್ತು
ಕನ್ನಡಿಗರ ಹೆಮ್ಮೆ ಹಂಪೆ ಹಾಳೂರು ಕೊಂಪೆಯಾಯ್ತು||

ಹೊರನೋಡು ಬೇಲೂರು ಒಳನೋಡು ಹಳೆಬೀಡ
ಕಲೆಯಸ್ವರ್ಗ ತಾನಾದ ಸೌಂದರ್ಯದ ನಾಡ
ಬೆಳಗೊಳದ ಗೊಮ್ಮಟನು ಎತ್ತಿತಲೆಯ ನಿಂದಿಹನು
ಕನ್ನಡಿಗರ ಔದಾರ್ಯವ ಮುಗ್ಧತನದಿ ಚೆಲ್ಲಿಹನು ||

ಬಾದಾಮಿ ಐಹೊಳೆ ಶಿಲ್ಪಸಿರಿಯ ಹೂಮಳೆ
ಪಟ್ಟದಾಕಲ್ಲಿನಲ್ಲಿ ಹೊಮ್ಮುತಿದೆ ಸಿರಿಕಳೆ
ಕೈದಳದ ಕೇಶವನ ಬೆಡಗಿನ ಬಲೆಯಲಿ
ಒಮ್ಮೆ ಕಷ್ಟ ಮರೆಯೆ ಬಾ ಕರುನಾಡ ಕಲೆಯಲಿ ||

# ಮಾತು-ಕೃತಿ

-ಟಿ. ಆರ್. ಮಹಾದೇವಯ್ಯ
'ಭಾಗ್ಯವತಿ' ನಂ. 578, ಮಾಗಡಿ ಕಾರ್ಡ್‌ರಸ್ತೆ, ವಿಸ್ತರಣೆ, ವಿಜಯನಗರ, ಬೆಂಗಳೂರು-8.

ಮಾತು ಮಾನವನಿಗೆ ಒದಗಿದ ಮಹಾಶಕ್ತಿ. ಇದರಿಂದಾಗಿ ಆತ ಪಶುಮಟ್ಟ ದಿಂದ ಮಾನವಸ್ತರಕ್ಕೇರಿದ. ಜ್ಞಾನ, ಸುಜ್ಞಾನ ಮತ್ತು ಮಹಾಜ್ಞಾನಗಳನ್ನು ಗಳಿಸುತ್ತಾ ಪ್ರಗತಿ ಪಥದಲ್ಲಿ ಸಾಗಲು ಅನುಕೂಲವಾಯಿತು. ಇಂಥ ಅಪೂರ್ವ ಶಕ್ತಿಯನ್ನು ಯುಕ್ತವಾಗಿ ಬಳಸಬೇಕೆಂಬುದಂತೂ ಸರಿಯೆ. ಏಕೆಂದರೆ ಮಾತಿನಿಂ ನಗೆ-ನುಡಿಯು, ಮಾತಿನಿಂ ಹಗೆ ಕೊಲೆಯು; ಮಾತಿನಿಂ ಸರ್ವ ಸಂಪದವು. ಮಾತುಬಲ್ಲವಗೆ ಮಾತು ಮಾಣಿಕ್ಯ; ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ ಹೊಲಬನರಿಯದ ಮಾತು ತಲೆ ಬೇನೆ - ಎಂಬ ಸರ್ವಜ್ಞನ ಮಾತುಗಳು ನುಡಿಯ ಮೌಲ್ಯವನ್ನು ಎತ್ತಿ ಹಿಡಿದಿವೆ. ಮಾತು ಪ್ರೀತಿ ವಿಶ್ವಾಸಗಳ, ಸೌಹಾರ್ದ ಭಾವನೆಯ ಸಾಧನವಾಗಬೇಕು. ಮಾತು ಬಲ್ಲವನಿಗೆ ಜಗಳವಿಲ್ಲ ಎಂಬ ಗಾದೆಯೇ ಇದೆ.

ಮಾತಿಗೆ ಬೆಲೆ ಬರುವುದು ಅದನ್ನಾಡುವವನ ಮನಸ್ಸು ಎಂಥದು ಎಂಬುದರಿಂದ. ಮಾತು ಬರಿಯ ಯಾಂತ್ರಿಕ ಕ್ರಿಯೆಯಾದರೆ, ಅದು ಹೇಳಿಕೊಟ್ಟುದನ್ನು ಪುನರು ಚ್ಚರಿಸುವ ಗಿಳಿಪಾಠವೆನಿಸುತ್ತದೆ. ಮಾತಿಗೆ ಮಹತ್ವ ಬರುವುದು ಆಡುವಾತ ಅದ ರಂತೆ ನಡೆದಿದ್ದಾನೆ ಎಂಬುದರಿಂದ. ನುಡಿದಂತೆ ನಡೆದು, ನಡೆದಂತೆ ನುಡಿದದ್ದೇ ಆದರೆ ಅದಕ್ಕೆ ಹೆಚ್ಚಿನ ಬೆಲೆ. ಏಕೆಂದರೆ ಅಂಥಮಾತುಗಳಿಗೆ ಅನುಭವದ ಹಿನ್ನೆಲೆ ಯಿರುತ್ತದೆ. ವಾಸ್ತವ ತಿಳುವಳಿಕೆಯ ಸತ್ವವಿರುತ್ತದೆ. ಆಡುವ ಮಾತು ಹೇಗಿರ ಬೇಕು ಎಂಬ ಬಗ್ಗೆ ವಿಚಾರ ಮಾಡಿರುವ ಬಸವಣ್ಣ, ನುಡಿಯಲ್ಲಿ ಮುತ್ತಿನಹಾರದಂತೆ ಏಕಸೂತ್ರತೆ, ರತ್ನದ ಕಾಂತಿಯಂತೆ ಸ್ವಯಂ ಪ್ರಕಾಶತೆ, ಸ್ಫಟಿಕದ ಸಲಾಕೆಯಂತೆ ಸ್ವಚ್ಛತೆ, ದೇವರನ್ನು ತಲೆದೂಗಿಸುವ ದಿವ್ಯತೆ ಇರಬೇಕು ಎಂದಿದ್ದಾರೆ. ಅವರು ಕೊನೆಯಲ್ಲಿ ಇನ್ನೊಂದು ಮಾತನ್ನು ಸೇರಿಸಿದ್ದಾರೆ. ಅದು 'ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ, ನುಡಿಯಲ್ಲಿ ಮಾತ್ರ ಎಚ್ಚರವಿದ್ದರೆ ಸಾಲದು. ನುಡಿದಂತೆ ನಡೆವ ಛಾತಿಯೂಬೇಕು ಎಂಬುದು ದೊಡ್ಡವರ ರೀತಿ,

ಅದಕ್ಕೇ ಅವರ ದೇವರ ಮುಂದೆ ಹೀಗೆ ನಿವೇದಿಸಿಕೊಂಡರು. ನಡೆ-ನುಡಿಗಳಿಗೆ ಅಂತರವಿಲ್ಲದಂತೆ ನಾನು ಬದುಕುತ್ತೇನೆ. ನಿಮ್ಮ ಕೈಯಲ್ಲಿ ತಕ್ಕಡಿ ಇದೆ. ತೂಗಿ ನೋಡಿ ಅದರಲ್ಲಿ ಒಂದು ಜವೆಯಷ್ಟು ಹೆಚ್ಚು ಕಡಿಮೆಯಾದರೂ ನನ್ನನ್ನು ಶಿಕ್ಷಿಸು ಎಂದು ಬೇಡಿದನು.

ಭಕ್ತಿ ಸುಭಾಷೆಯ ನುಡಿವೆ! ನುಡಿದಂತೆ ನಡೆವೆ
ನಡೆಯೊಳಗೆ ನುಡಿಯ ಪೂರೈಸುವೆ
ಮೇಲೆ ತೂಗುವ ತ್ರಾಸುಕಟ್ಟಳೆ ನಿಮ್ಮ ಕೈಯಲ್ಲಿ
ಒಂದು ಜವೆ ಕೊರತೆಯಾದರೆ
ಎನ್ನನದ್ದಿ ನೀನೆದ್ದು ಹೋಗು ಕೂಡಲ ಸಂಗಮದೇವಾ.

ಮಾತನಾಡುವುದು ಸುಲಭ, ಅದರಂತೆ ಬದುಕಿನಲ್ಲಿ ಆಚರಿಸುವುದು ಕಷ್ಟವೆಂಬ ದನ್ನು ಶಿವಯೋಗಿ ಸಿದ್ಧರಾಮ ಮನವರಿಕೆ ಮಾಡಿರುವ ರೀತಿ ಅನನ್ಯವಾಗಿದೆ.

ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ
ಒಮ್ಮೆ ನಡೆಯಬಹುದೆ ನಿರ್ಧರವಾಗಿ ಸದ್ಭಕ್ತಿ ಸದಾಚಾರವ?
ನುಡಿದಂತೆ ನಡೆವ, ನಡೆದಂತೆ ನುಡಿವ
ಸದ್ಭಕ್ತಿ ಸದಾಚಾರಯುಕ್ತ ಮಹಾತ್ಮರ ಪಾದವ
ಹಿಡಿದು ಬದುಕಿದೆನಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

ನೂರು ನುಡಿಗಿಂತ ಒಂದು ನಡೆಮಿಗಿಲು. ಏಕೆಂದರೆ ಆಚರಿಸದ ಪೊಳ್ಳು ಮಾತು ಸುಳ್ಳಿಗಿಂತ ಕಡೆ. ಜೀವನದಲ್ಲಿ ನಡೆ-ನುಡಿಗಳ ನಡುವೆ ಅಂತರವಿದ್ದಾಗ, ಮಾತಿಗೂ-ಕೃತಿಗೂ ತಾಳಮೇಳ ವಿಲ್ಲವಾದಾಗ ಆಗುವ ಅನರ್ಥಗಳು ಊಹಾತೀತ. ನಡೆಯೊಂದು ಪರಿ, ನುಡಿಯೊಂದು ಪರಿಯಾಗಿ ಬದುಕು ಇಬ್ಬಂದಿಯಾಗುತ್ತದೆ. ಮಾತನ್ನೇ ತಮ್ಮ ಬಂಡವಾಳ ಮಾಡಿಕೊಂಡವರಿದ್ದಾರೆ. ಅವರ ಮಾತಿಗೂ ನಿಜವಾದ ಆಚರಣೆಗೂ ಇರುವ ದೊಡ್ಡ ಕಂದರವನ್ನು ಕಂಡ ಸರ್ವಜ್ಞ ಹೀಗೆ ವಿಡಂಬಿಸಿದ್ದಾನೆ:—

ವಚನದೊಳೆಲ್ಲರೂ ಶುಚಿ ವೀರ ಸಾಧುಗಳು
ಕುಚ ಶಸ್ತ್ರ ಹೇಮ ಸೋಕಲು ಲೋಕದೊಳ-
ಗಚಲರಾಗದವರಾರು ?

ತಾನೊಬ್ಬ ಸುಶೀಲನೆಂದೂ, ವೀರನೆಂದೂ, ವಿರಾಗಿಯೆಂದೂ ಮಾತಿನಲ್ಲಿ ಕೊಚ್ಚಿಕೊಳ್ಳುವವರಿಗೆ ಕ್ರಮವಾಗಿ ಕುಚದ, ಆಯುಧದ, ಚಿನ್ನದ ಸ್ಪರ್ಶವಾಗುತ್ತಿದ್ದಂತೆ ಅವರು ಚಂಚಲರಾಗುತ್ತಾರೆ, ಸೋತುಹೋಗುತ್ತಾರೆ. ನುಡಿಗೂ, ವಾಸ್ತವ ನಡೆಗೂ ಎಷ್ಟೊಂದು ಅಂತರ? ಇದ ಕಂಡ ಕವಿ ಅಡದೆ ಮಾಡುವವರನ್ನು ಉತ್ತಮರೆಂದೂ, ಆಡಿ ಮಾಡುವವರನ್ನು ಮಧ್ಯಮವರ್ಗದವರೆಂದೂ, ಆಡಿ ಮಾಡದೆ ಹೋಗುವವರನ್ನು ಅಧಮರೆಂದೂ ವರ್ಗೀಕರಿಸಿ ಬಿಟ್ಟಿದ್ದಾನೆ.

ಆದ್ದರಿಂದ ಮಾತು ಮತ್ತು ಕೃತಿ ಬದುಕಿನ ನಾಣ್ಯದ ಎರಡು ಮುಖಗಳಾಗಿರುವವನು ಇಹದಲ್ಲೂ ಸಂದು, ಪರದಲ್ಲೂ ಸಲ್ಲುವ ಚೊಕ್ಕನಾಣ್ಯವೆನಿಸಿಕೊಳ್ಳುತ್ತಾನೆ.

## ಶ್ರೀ ಗುರುವೆ ಚನ್ನವೀರ

ಬಿ. ಮಲ್ಲಿಕಾರ್ಜುನ, ನಂ. 5-4-60, ಸೋಮವಾರಪೇಟೆ, ರಾಯಚೂರು 584 101.

ಅಯ್ಯಾ ಮನದಲ್ಲಿ ಹೀನಗುಣವನ್ನಿಟ್ಟುಕೊಂಡು
ಬಹಿರಂಗದಲಿ ಶುದ್ಧನಂತೆ ಕಾಣುವ
ಕಂಡು ಕಂಡವರ ಟೀಕಿಸುತ ಮೆರೆವವ
ಅವಶುದ್ಧನೇನಯ್ಯ: ಅಲ್ಲ, ಅಲ್ಲ,
ನೋಡಾ ಶ್ರೀಗುರುವೆ ಚನ್ನವೀರ.

ಅಯ್ಯಾ ಮುಂದೆ ವ್ಹಾ, ವ್ಹಾ ಎಂದು
ಹಿಂದೆ ಹೀ, ಹೀ ಎಂದು
ಅನ್ನುವವರ ನೀ ಕೂಡ ಬೇಡ
ತಿಳಿದು ಅಲ್ಲಿ ನೀ ನಿಲ್ಲಬೇಡ
ಸದಾ ಸತ್ಸಂಗವ ಮಾಡುತಿರು
ಅಂತಿದ್ದೊಡೆ ಚೆನ್ನ ನೋಡಾ
ಶ್ರೀಗುರುವೆ ಚನ್ನವೀರ.

ಅಯ್ಯಾ ಕಂಣು ಮುಚ್ಚಿದರೂ ಬಯಲು
ಕಂಣು ತೆರೆದರೂ ಬಯಲು
ಬಯಲೆಲ್ಲವೂ ನೀನಾಗಿರಲು
ನೀನಿರುವ ತಾವಾವುದೆಂದೊಡೆ
ನಸುನಗುವ ನಮ್ಮ ಶ್ರೀಗುರು ಚನ್ನವೀರ.

ಅಯ್ಯಾ ಪೂಜ್ಯರೆಂಬುವವರು
ಪೂಜನೀಯವಾಗಿದ್ದರೆ ಚೆನ್ನ
ಪೂಜೆ ಮಾಡುವ ಬಕುತ
ಪೂಜೆ ಮಾಡಿಸಿಕೊಳ್ಳುವ ಗುರು
ಶುದ್ಧಾತ್ಮವಿದ್ದೊಡೆ ಇನ್ನೂ ಚೆನ್ನ
ನೋಡಾ ಶ್ರೀಗುರುವೆ ಚನ್ನವೀರ.

# ವಿಜ್ಞಾನಿಗಳ ದೃಷ್ಟಿಯಲ್ಲಿ ದೇವರು - ೧

ಎಚ್. ಎಸ್. ನರಸಿಂಹಜೀಯರ್, ಲಕ್ಷ್ಮಯ್ಯ ತೋಟ, 14ನೇ ಕ್ರಾಸ್, ಸೋಮೇಶ್ವರಪುರಂ, ತುಮಕೂರು-2.

ಹಿರಿಯ ಆಧ್ಯಾತ್ಮವಾದಿಗಳು, ಸಂತರು, ಋಷಿಗಳು ಮತ್ತು ಯೋಗಿಗಳೆಲ್ಲರೂ ಸಹ ಈ ಮಹಾನ್ ವಿಶ್ವದ ಆಗು ಹೋಗುಗಳಿಗೆ ಕಾರಣ ಕರ್ತನಾದ ಒಬ್ಬ ದೇವರಿದ್ದಾನೆಂದು ಹಿಂದಿ ನಿಂದಲೂ ಸಾರುತ್ತಾ ಬಂದಿದ್ದಾರೆ. ಇತ್ತೀಚಿನವರಾದ ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದ, ಶ್ರೀ ರಮಣಮಹರ್ಷಿ ಮತ್ತು ಶ್ರೀ ಅರವಿಂದ ಘೋಷರಂತಹ ಶ್ರೇಷ್ಠ ಯೋಗಿವರ್ಯರೂ ಸಹ ತಮ್ಮ ಅನುಭವದ ಮೂಲಕ ದೇವರ ಅಸ್ತಿತ್ವವನ್ನು ಖಚಿತ ಪಡಿಸಿದ್ದಾರೆ. ಸ್ವಾಮಿ ವಿವೇಕಾನಂದರು ಕಾಲೇಜಿನ ಯುವಕನಾಗಿದ್ದ ಸಂದರ್ಭದಲ್ಲಿ ಮೊದಲಬಾರಿಗೆ ಶ್ರೀ ರಾಮಕೃಷ್ಣ-ಪರಮಹಂಸರನ್ನು ಭೇಟಿ ಮಾಡಿದಾಗ ನೀವು ದೇವರನ್ನು ನೋಡಿದ್ದೀರಾ 'ಎಂದು ನೇರವಾಗಿ ಪ್ರಶ್ನಿಸಿದಾಗ, ಶ್ರೀ ರಾಮಕೃಷ್ಣ ಪರಮಹಂಸರು" ನಾನು ನೋಡಿದ್ದೇನೆ. ಅಲ್ಲದೆ ನಾನು ನಿನ್ನೊಂದಿಗೆ ಹೇಗೆ ಮಾತನಾಡುತಿದ್ದೀನೋ ಹಾಗೆ ದೇವರೊಂದಿಗೂ ಮಾತನಾಡಬಹುದು" ಎಂಬ ಖಚಿತವಾದ ಉತ್ತರವನ್ನು ಕೊಟ್ಟುದಲ್ಲದೆ ಅವರಿಗೆ ಪರಮಾತ್ಮನ ಸಾಕ್ಷಾತ್ಕಾರ ಮಾಡಿಸಲು ದಾರಿತೋರಿದ ಮಹಾನುಭಾವರು. ಈ ಶತಮಾನದಲ್ಲಿಯೇ ಇದ್ದು ಇಡೀ ವಿಶ್ವಕ್ಕೇ ಆಧ್ಯಾತ್ಮ ಮಾರ್ಗದರ್ಶನ ಮಾಡಿಸಿದ ಈ ವಿವೇಕಾನಂದರಂತಹ ಮಹಾತ್ಮರು ದೇವರ ಇರುವಿಕೆಯ ಬಗ್ಗೆ ಖಚಿತವಾಗಿ ತಿಳಿಸಿದ್ದರೂ ಸಹ, ನಮ್ಮಲ್ಲಿ ವೈಜ್ಞಾನಿಕ ಮನೋಭಾವನೆ ಬೆಳಸಿಕೊಂಡಿದ್ದೇವೆ ಎಂದು ತಿಳಿದುಕೊಂಡಿರುವ ಕೆಲವರು ದೇವರ ಇರುವಿಕೆಯನ್ನು ನಂಬುತ್ತಿಲ್ಲ ಅಷ್ಟೇ ಅಲ್ಲದೆ ದೈವದ ಕಲ್ಪನೆಯನ್ನು ಮೂಡಿಸುವ ವೇದ, ಉಪನಿಷತ್ತುಗಳನ್ನು ಬೂಸಾ ಸಾಹಿತ್ಯವೆಂದು ಅಲ್ಲಗಳೆಯುವ ಜನರಿದ್ದಾರೆ.

ವಾಸ್ತವಿಕವಾಗಿ ಸ್ವತಃ ವಿಜ್ಞಾನಿಗಳು ದೇವರ ಇರುವಿಕೆಯ ಬಗ್ಗೆ ತಮ್ಮ ತಮ್ಮ ಪ್ರಯೋಗಗಳ ಅನುಭವದಿಂದ ತಮ್ಮದೇ ಆದ ಅಭಿಪ್ರಾಯವನ್ನು ಹೊಂದಿದ್ದಾರೆ. ಈ ಅಭಿಪ್ರಾಯಗಳು ನಮ್ಮ ವೇದಾಂತದ ಅಭಿಪ್ರಾಯಗಳಿಗೆ ಹೊಂದಿಕೊಂಡಂತಿವೆ. ವಿಜ್ಞಾನಿಗಳೇ ಹೇಳುವಂತೆ, ಇತ್ತೀಚಿನ ಹೊಸ ಹೊಸ ಸಂಶೋಧನೆಗಳಿಂದ ಭೌತ ಶಾಸ್ತ್ರವು ಆಧ್ಯಾತ್ಮ ಶಾಸ್ತ್ರಕ್ಕೆ ಹತ್ತಿರ ಬರುತ್ತಿದೆ. "Physics is becoming meta physics" ಎಂದು ಅಭಿಪ್ರಾಯ ಪಡುತ್ತಿದ್ದಾರೆ.

ತಮ್ಮ ಜೀವನವನ್ನೆಲ್ಲಾ ವೈಜ್ಞಾನಿಕ ಸಂಶೋಧನೆಗಳಲ್ಲಿ ಕಳೆದು, ಅಪಾರ ಅನುಭವ ಗಳಿಸಿದ ಪ್ರಮುಖ ವಿಜ್ಞಾನಿಗಳು ದೇವರ ಅಸ್ತಿತ್ವದ ಬಗ್ಗೆ ಏನು ಹೇಳಿದ್ದಾರೆಂಬುದನ್ನು ಗಮನಿಸುವುದೇ ಈ ಲೇಖನದ ಉದ್ದೇಶ. ಪ್ರತಿದಿನವೂ ನಮ್ಮ ಜೀವನಕ್ಕೆ ಅತ್ಯಾವಶ್ಯಕವಾದ ವಿದ್ಯುಚ್ಛಕ್ತಿಯನ್ನು ಕಂಡುಹಿಡಿದ ವಿಜ್ಞಾನಿ ಮೈಕೆಲ್ ಫ್ಯಾರಡೆ ಈ ರೀತಿ ಹೇಳಿದ್ದಾನೆ.

"These are the glimmerings we have of the second Causes by what the ONE GREAT CAUSE works HIS ideas and Governs the earth. The book of nature which we read is written by the finger of God. Our science, while it shows us these things, shall lead us to think of HIM who wrought them." ಈ ವಿಜ್ಞಾನಿಯ ಅಭಿಪ್ರಾಯದಂತೆ ಈ ವಿಶ್ವವೆಲ್ಲವೂ ಒಂದು ಮಹಾನ್‌ಶಕ್ತಿಯ ಕಲ್ಪನೆಯಂತೆ ಸೃಷ್ಟಿಯಾಗಿ ನಡೆಯುತ್ತಿದೆ. ವಿದ್ಯುಚ್ಛಕ್ತಿಯಂತಹ ಸಣ್ಣ ಶಕ್ತಿಗಳೆಲ್ಲವೂ ಆ ಮಹಾ ಕಾರಣ ಪುರುಷನ ತುಣುಕುಗಳು. ಆ ಸೃಷ್ಟಿಕರ್ತನನ್ನು ಯೋಚಿಸುವಂತೆ ವಿಜ್ಞಾನವು ನಮಗೆ ದಾರಿತೋರಿಸಲಿ" ಎಂದಿದ್ದಾನೆ.

ವಿಕಾಸವಾದವನ್ನು ಮಂಡಿಸಿದ ವಿಜ್ಞಾನಿ ಚಾರ್ಲಸ್ ಡಾರ್ವಿನ್‌ನ ಅನುಭವದಂತೆ——— the extreme difficulty or rather impossibility of Conceiving this unqive and wonderful Univrse, including man with his capacity of looking for forwards and far in to futurity, as the result of blind Chance or necessity. When these reflecting, I feel impelled to look to a FIRST CAUSE having an intelligent mind, in some degree analogous to that of man." ಸರಿಸಾಟಿಯಿಲ್ಲದ, ಆಶ್ಚರ್ಯಕರವಾದ ಈ ವಿಶ್ವ, ಇದರಲ್ಲಿ ಈ ಮಾನವ, ಅವನ ಬುದ್ಧಿಶಕ್ತಿ ಹಾಗೂ ದೂರಾಲೋಚನ ಶಕ್ತಿ-ಇವೆಲ್ಲವನ್ನು ಪರಿಶೀಲಿಸಿದಾಗ, ಇವೆಲ್ಲವೂ ಯಾವ ಕಾರಣವಿಲ್ಲದೆ ಅಕಸ್ಮಾತ್ತಾಗಿ ಸೃಷ್ಟಿಯಾದವುಗಳೆಂದು ನಂಬುವುದು ಕಷ್ಟ ಸಾಧ್ಯ, ಅಷ್ಟೇಕೆ ನಂಬಲು ಸಾಧ್ಯವೇ ಇಲ್ಲ. ಇವೆಲ್ಲಕ್ಕೂ ಮನುಷ್ಯನ ಬುದ್ಧಿ ಶಕ್ತಿ, ಆಲೋಚನಾಶಕ್ತಿಯನ್ನು ಹೋಲುವ ಪ್ರಚಂಡ ಪ್ರಜ್ಞಾಶಕ್ತಿಯಿಂದ ಕೂಡಿದ ಯಾವುದೋ ಒಂದು ಮಹಾ ಕಾರಣ ಶಕ್ತಿಯ ಬಗ್ಗೆ ಯೋಚಿಸಲೇಬೇಕಾಗಿದೆ." ಎಂದಿದ್ದಾನೆ. ಇವನ ಈ ಅಭಿಪ್ರಾಯವು ವೇದಾಂತದ ದೈವ ಕಲ್ಪನೆಗೆ ಹೋಲುತ್ತದೆ.

James Jeans ಎಂಬ ವಿಜ್ಞಾನಿ "That the Physical systems are in the nature of thought than mere machines" ಎಂದಿದ್ದಾನೆ. ಈ ವಿಶ್ವದಲ್ಲಿ ಕಂಡುಬರುವ ಭೌತ ವಿಜ್ಞಾನದ ವ್ಯವಸ್ಥೆಯು ಯಾಂತ್ರಿಕವಾಗಿಲ್ಲದೆ ಯಾವುದೋ ಒಂದು ಯೋಚನಾ ಶಕ್ತಿಯಿಂದ ರಚಿತವಾದಂತಿವೆ" ಎಂಬ ಅಭಿಪ್ರಾಯವನ್ನು ಸೂಚಿಸಿದ್ದಾನೆ.

Dr. E. Lester Smith ಎಂಬ ವಿಜ್ಞಾನಿಯ ಹೇಳಿಕೆಯಂತೆ" The ordered Complexity of living things Certainly suggests intelligent design. In deed, the entire Universe gives eloquent testimony of being a product of mind and intelligence, as some scientists have maintained. ಈ ಭೂಮಿಯ ಮೇಲಿರುವ ಜೀವಿಗಳಲ್ಲಿ ಕಂಡುಬರುವ ನಿಯಮಬದ್ಧವಾದ ಸಂಕೀರ್ಣತೆಯು ಬುದ್ಧಿವಂತಿಕೆಯ ಉದ್ದೇಶವನ್ನು ಸೂಚಿಸುತ್ತದೆ. ಅನೇಕ ವಿಜ್ಞಾನಿಗಳು ಹೇಳುವಂತೆ ಈ ವಿಶ್ವವೇ ಮಹಾ ಬುದ್ಧಿವಂತಿಕೆಯಿಂದ ಸೃಷ್ಟಿಸಲ್ಪಟ್ಟಿದೆ ಎಂಬುದನ್ನು "ಸೂಚಿಸುವ ದ್ಯೋತಕವಾಗಿದೆ" ಎಂದು ತಿಳಿಸಿದ್ದಾನೆ.

According to biologist Fairfield Osborne:- (web of life) The most basic truth regarding our earth here is that all living beings in some manner are related each other, This fact, While valid mainly as a physical principle, Carries implications of a spiritual nature. ಈ ಪ್ರಪಂಚದ ಪ್ರತಿಯೊಂದು ಜೀವಿಯು ಸಹ ಯಾವುದೋ ಒಂದು ವಿಧದಲ್ಲಿ ಒಂದಕ್ಕೊಂದು ಸಂಬಂಧ ಹೊಂದಿವೆ, ಇದು ಭೌತಿಕವಾಗಿ ಅಲ್ಲದೆ ಆಧ್ಯಾತ್ಮಿಕ ವಾಗಿಯೂ ಸಂಬಂಧವಿರುವಂತೆ ತಿಳಿಯುತ್ತದೆ"-ಎಂದಿದ್ದಾನೆ. ಇದು ನಮ್ಮ ಆಧ್ಯಾತ್ಮದಲ್ಲಿ ತಿಳಿಸುವಂತೆ ಸರ್ವ ಪ್ರಾಣಿಗಳಲ್ಲಿಯೂ ಒಬ್ಬನೇ ಪರಮಾತ್ಮನಿದ್ದಾನೆ ಎಂಬುವ ಸತ್ಯಕ್ಕೆ ಸಾಮೀಪ್ಯವಿರುವುದನ್ನು ಕಾಣಬಹುದಾಗಿದೆ.

Dr. Rhine and Dr. Bore of YALE University having Conducted a number of experiments on animals and studied their behaviour, came to the Conclusion that there is some power which is more subtle than electricity and which is Pervading the whole Universe and binding all animals together. Their Conclusion Was that the Whole Universe is one indivisible Whole on account of this one Power Which is all Pervading."

ಯೇಲ್ ವಿಶ್ವವಿದ್ಯಾನಿಲಯದ ಜೀವಶಾಸ್ತ್ರ ವಿಜ್ಞಾನಿಗಳಾದ ಡಾ|| ರೈನ್ ಮತ್ತು ಡಾ|| ಬೋರ್ ಎಂಬುವರು ಪ್ರಾಣಿಗಳಮೇಲೆ ಅನೇಕ ಪ್ರಯೋಗಗಳನ್ನು ಮಾಡಿ, ಅವುಗಳ ವರ್ತನೆಗಳನ್ನು ಪರಿಶೀಲಿಸಿದನಂತರ ಕೆಳಕಂಡ ತೀರ್ಮಾನಕ್ಕೆ

# ವಿಜ್ಞಾನ ಮತ್ತು ಧರ್ಮ-೫.

ಅರಿಯೂರು ನರಸಿಂಹಮೂರ್ತಿ ಪ್ರಶಿಕ್ಷಕರು, ಶ್ರೀ ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ತುಮಕೂರು.

## ಅನುಕರಣೆಯ ಫಲ

ಇತ್ತೀಚಿನ ದಿನಗಳಲ್ಲಿ ಅನುಕರಣೆಯ ಸ್ಥಾನ ಎಲ್ಲಿಯವರೆಗೆ ಮುಟ್ಟಿದೆ ಎಂದರೆ, ಅರ್ಥಹೀನ ಧಾರ್ಮಿಕ ಚಟುವಟಿಕೆಗಳು ಅನೇಕ ವಿಪರ್ಯಾಸಕ್ಕೆ ಎಡೆಮಾಡಿಕೊಟ್ಟಿದೆ ಎಂಬುದನ್ನು ದಿನನಿತ್ಯ ಕಾಣುತ್ತಿದ್ದೇವೆ. ಇತ್ತೀಚಿನ ಎಲ್ಲಾ ಘಟನೆಗಳಲ್ಲಿ ಒಂದಲ್ಲಾ ಒಂದು ರೀತಿ ಅಶಾಂತಿಯನ್ನುಂಟುಮಾಡುತ್ತಿರುವುದು ಅನುಭವಕ್ಕೆ ಬಂದಿದೆ. ಇದಕ್ಕೆ ಸರಿಯಾದ ಕಾರಣವನ್ನು ವಿವೇಚನಾಶಕ್ತಿಯಿಂದ ಹುಡುಕಿದರೆ, ಎಲ್ಲವೂ ಅನರ್ಥಕ್ಕೆ ಕಾರಣ ಎಂಬುದನ್ನು ಬುದ್ಧಿ ಜೀವಿಗಳು, ಸಾಧುಸಂತರು, ಮಠಾಧಿಪತಿಗಳೂ ಸಹ ಕೈ ಕಟ್ಟಿ ಕುಳಿತು ಕೊಳ್ಳುವಂತಾಗಿದೆ. ಅನಾವಶ್ಯಕ ಸಣ್ಣ ಪುಟ್ಟ ಕಾರಣಗಳೇ ಪ್ರಮಾದಕ್ಕೆ ಮುಟ್ಟುತ್ತಿವೆ.

ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ನೈತಿಕ, ವೈಜ್ಞಾನಿಕ, ಹೆಚ್ಚಾಗಿ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅನುಕರಣೆಯ ಸ್ಥಾನ ಪರಮಾವಧಿಗೆ ಮುಟ್ಟಿದೆ. ಇದರಲ್ಲಿ ಅರ್ಥವತ್ತಾದ ಅನುಕರಣೆಗಿಂತ ಅನರ್ಥ ಅನುಕರಣೆಯೇ ಹೆಚ್ಚೆಂಬುದನ್ನು ನಾವೆಲ್ಲರೂ ಅರಿಯಬಹುದಲ್ಲವೇ ?-

## ವ್ಯಕ್ತಿಯಲ್ಲಿ ಅಡಗಿರುವ ಶಕ್ತಿ

ಯಾವುದೇ ಒಂದು ವಸ್ತುವಿನ ಒಂದು ಗ್ರಾಂ ನಷ್ಟು ತೂಕವನ್ನು ತೆಗೆದುಕೊಂಡು ಶಕ್ತಿಯನ್ನಾಗಿ ಪರಿವರ್ತಿಸಿದರೆ. ಆ ಶಕ್ತಿಯ ಪರಿಣಾಮವು ಮೂರುಕೋಟಿ ಮೂವತ್ತು ಲಕ್ಷ ಕುದುರೆಗಳು ಒಟ್ಟಿಗೆ ಸೇರಿ ಒಂದು ಗಂಟೆ ಕೆಲಸಮಾಡುವ ಶಕ್ತಿಗೆ. ಸಮ ಇದನ್ನು ಮಹಾವಿಜ್ಞಾನಿ ಆಲ್ಬರ್ಟ್ ಐನ್ ಸ್ಟೀನರು ಸೂತ್ರವೊಂದರ ಮೂಲಕ ಶ್ರುತಪಡಿಸಿದ್ದಾರೆ. ಆ ಸೂತ್ರವೆ $E=mc^2$ ಇಲ್ಲಿ C ಎಂಬುದು ಬೆಳಕಿನ ವೇಗ, E ಎಂಬುದು m ಎಂಬ ದ್ರವ್ಯರಾಶಿಯುಳ್ಳ ವಸ್ತುವಿನ ಶಕ್ತಿಯನ್ನು ಸೂಚಿಸುತ್ತದೆ.

## ಧರ್ಮಾಚರಣೆಯಲ್ಲಿ ವಿಜ್ಞಾನದ ಪಾತ್ರ:—

ವಿಜ್ಞಾನವೆಂಬುದು ಕೇವಲ ಒಬ್ಬ ವ್ಯಕ್ತಿಯ ಜ್ಞಾನವಿಕಾಸಕ್ಕಾಗಲೀ, ವಿಷಯವನ್ನು ವಿವರಿಸಿ ಬೋಧಿಸುವುದಕ್ಕಾಗಲೀ, ಕೃತಿರಚಿಸಿ ಸರ್ಟಿಫಿಕೇಟ್ ಅಥವಾ ಪ್ರಶಸ್ತಿ ಪಡೆಯುವುದಕ್ಕಾಗಲೀ, ರಚಿತವಾದದ್ದಲ್ಲ. ಸಾಹಿತ್ಯ ಕ್ಷೇತ್ರದಲ್ಲಿಯೂ ಇದರ ಮಹತ್ವ ಇದ್ದೇ ಇದೆ. ಕ್ರಮಬದ್ಧವಾದ ನಡವಳಿಕೆಯೇ ವಿಜ್ಞಾನ. ಜೀವನದ ಮಟ್ಟ ಕ್ಲಿಷ್ಟ ಸ್ಥಿತಿಯಲ್ಲಿರುವಾಗ ತನಗಿಂತ ಮೇಲ್ಮಟ್ಟದವರನ್ನು ಅನುಕರಿಸಿ ಬಾಳ್ಮೆ ನಡೆಸುವ ವ್ಯಕ್ತಿ. ಈಜು ಬಾರದಿದ್ದ ವ್ಯಕ್ತಿ ಈಜುವವನನ್ನು ಕಂಡು ಈಜಲು ನೀರಿಗೆ ಬಿದ್ದಾಗ ಅನುಭವಿಸುವ ಅನಾಹುತಕ್ಕೆ ದೇವರು ಹೊಣೆಯೇ ?

ಬಂದಿದ್ದಾರೆ. "ವಿದ್ಯುಚ್ಛಕ್ತಿಗಿಂತಲೂ ಅತಿಕುಶಾಗ್ರಮತಿಯಿಂದ ವರ್ತಿಸುವ ಹಾಗು ಇಡೀ ವಿಶ್ವವನ್ನು ಆವರಿಸುವ ಒಂದು ಮಹಾನ್ ಶಕ್ತಿ ಈ ಪ್ರಾಣಿಗಳೆಲ್ಲವನ್ನೂ ಕೂಡಿಸಿದೆ. ಅವರ ತೀರ್ಮಾನವೆಂದರೆ ಈ ಒಂದು ಮಹಾನ್ ಶಕ್ತಿಯು ಇಡೀ ವಿಶ್ವದಲ್ಲೆಲ್ಲ ಆವರಿಸಿರುವುದರಿಂದ ಇಡೀ ವಿಶ್ವವೇ ಅಭೇದ್ಯವಾಗಿ ಒಂದಾಗಿದೆ, ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವರ ಈ ಹೇಳಿಕೆಯು ವೇದಾಂತದಲ್ಲಿ ಬರುವ' ಸರ್ವಂ ಖಲು-ಇದಂ ಬ್ರಹ್ಮ" (All the living beings objects we see arround us are only Brahman' ಎಂಬ ಅಭಿಪ್ರಾಯಕ್ಕೆ ಹೊಂದಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ವಿಜ್ಞಾನಿಗಳು ದೇವರಬಗ್ಗೆ ಅವನ ಇರುವಿಕೆಯ ಬಗ್ಗೆ ತಿಳಿಸಿರುವ ಇಂತಹ ಅನೇಕ ಅಭಿಪ್ರಾಯಗಳನ್ನು ಪರಿಶೀಲಿಸಿದ ನಂತರ ಡಾ|| ಬ್ರಹ್ಮಾನಂದ ಕುರ್ವಿ ಮತ್ತು ಡಾ|| ಗಂಗೂಲಿ ಮುಂತಾದ ವಿಜ್ಞಾನಿಗಳು ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾ ಈರೀತಿ ಬರೆದಿದ್ದಾರೆ.

"In recent years, Scientists in increasing numbers are coming round to the view which einstein gave to new physics" that behind the "field" and its physical existence stands the mysterious "non-material Reality" which in now being called by them variously as 'Mind' 'Mind-stuff' 'Substratum' 'consciousness' 'cosmic--conseiousness' and so on, ಅಂದರೆ ಭೌತಶಾಸ್ತ್ರವಿಜ್ಞಾನಿ ಐನ್‌ಸ್ಟೀನ್ ಹೇಳಿದಂತೆ ಈ ಭೌತವಿಶ್ವದ ಹಿಂದೆ ರಹಸ್ಯವಾದ ಗೂಢವಾದ ಪ್ರಾಪಂಚಿಕವಲ್ಲದ ವಾಸ್ತವಿಕತೆ ಇದೆ (Non material Reality) ಎಂದು ಹೇಳಿರುವುದನ್ನೇ ಈಗಿನ ವಿಜ್ಞಾನಿಗಳು ಒಪ್ಪುತ್ತಾ ಅದನ್ನೇ ಮೇಲೆ ತಿಳಿಸಿದಂತೆ ಅನೇಕ ಹೆಸರುಗಳಿಂದ ಕರೆಯುತ್ತಿದ್ದಾರೆ.

ಈ ಎಲ್ಲಾ ವಿಜ್ಞಾನಿಗಳ ಅಭಿಪ್ರಾಯದಂತೆ ಈ ವಿಶ್ವ ಜಡವಲ್ಲ. ಇದನ್ನು ಯಾವುದೋ ಒಂದು ಮಹಾಶಕ್ತಿ ಸೃಷ್ಟಿಸಿ ನಿಯಮ ಬದ್ಧವಾಗಿ ನಡೆಸಿಕೊಂಡು ಹೋಗುತ್ತಿದೆ. ಅದು ಇಡೀ ವಿಶ್ವವನ್ನೇ ವ್ಯಾಪಿಸಿದೆ. ಇದನ್ನು ಅವರು 'Mind'ಎಂದೂ Mind stuff ಎಂದೂ ಹಾಗೂ ಇತರೆ ಹೆಸರುಗಳಿಂದ ಕರೆದಿದ್ದಾರೆ. ಮಹಾಶಕ್ತಿ ಇದೆ ಎಂಬಕಲ್ಪನೆ ವಿಜ್ಞಾನಿಗಳಲ್ಲಿ ಮೂಡಿದೆ. ಇದನ್ನೇ ನಮ್ಮ ಋಷಿಗಳು, ಸಾಧುಸಂತರು, ಯೋಗಿಗಳು ಭಗವಂತನೆಂದೂ, ಸರ್ವಜ್ಞ, ಸರ್ವಶಕ್ತಿ ಸರ್ವವ್ಯಾಪಿ ದೇವರೆಂದೂ ಕರೆದಿದ್ದಾರೆ ಅಲ್ಲವೇ ?

ಯುಗಾದಿ ವರ್ಷದ ಮೊದಲ ಹಬ್ಬ, ಚಾಂದ್ರಮಾನ ವರ್ಷದಲ್ಲಿ ಭಾರತೀಯರು ಸಾಂಪ್ರದಾಯಿಕವಾಗಿ ಆಚರಿಸುವುದನ್ನು ಕಾಣುತ್ತೇವೆ. ಇಲ್ಲಿ ಅನುಕರಣೆ ಪಾತ್ರ ಗಮನಿಸಿ. ಹೋಳಿಗೆ ಊಟ, ಹೊಸಬಟ್ಟೆ, ಹೊಸಪಾತ್ರೆಗಳು ಕೊಳ್ಳುವ ಆಚರಣೆ ಇದ್ದೇ ಇದೆ. ತನ್ನ ಸಂಪಾದನೆಗೆ ಮೀರಿ ಸಾಮಾನುಗಳನ್ನು ಕೊಂಡು ಹಬ್ಬ ಆಚರಿಸುವಾಗ ವ್ಯಕ್ತಿಯಕಷ್ಟ, ತಂದಿರುವ ಸಾಮಾನುಗಳನ್ನು ಬಳಸಿ ಕೊಂಡು ಅಡಿಗೆ ತಯಾರಿಸುವ ತನ್ನ ಹೆಂಡತಿಯಕಷ್ಟ, ಇದೇನೂ ಇಲ್ಲದೆ ಯೋಚಿಸುವ ವ್ಯಕ್ತಿಯಲ್ಲಿರುವ ಮನೋಭಾವ ಮುಂತಾದ ಅನುವುಗಳನ್ನು ಗಮನಿಸಿದಾಗ ಹಬ್ಬ ಬಂದದ್ದೆ ತಪ್ಪು ಎನ್ನಬಹುದೆ? ಹೋಳಿಗೆಯ ತಯಾರಿಕೆಯಲ್ಲಿ ಹೂರಣವು ವಿಜ್ಞಾನ ವಾದರೆ ಹೊರಗೆಸುತ್ತಿರುವ ಗೋಧಿಹಿಟ್ಟು ಸಾಹಿತ್ಯವಾಗಿರುತ್ತದೆ. ಕೇವಲ ಗೋಧಿ ಹಿಟ್ಟನ್ನಾಗಲೀ, ಹೂರಣವನ್ನಾಗಲೀ ಪ್ರತ್ಯೇಕವಾಗಿ ತಿಂದಾಗ ಅದು ಹೋಳಿಗೆ ತಿಂದಂತಾಗುದಿಲ್ಲ ಮತ್ತು ಹೋಳಿಗೆ ತಯಾರಿಸಲಾಗುವುದಿಲ್ಲ. ಒಳಗೆ ಗುಪ್ತವಾಗಿ ಅಡಗಿರುವ ಹೂರಣ ಹೊರಗೆ ಅದನ್ನು ತಯಾರಿಸಲು ಬೇಕಾದ ಗೋಧಿ ಹಿಟ್ಟು ವಿಜ್ಞಾನ ಮತ್ತು ಸಾಹಿತ್ಯದ ಮೊತ್ತವನ್ನು ಕೊಡುತ್ತದೆ. ಇದರ ಸವಿಯನ್ನು ಅನು-ಭವಿಸುವವರು ಎಲ್ಲಾ ಕಷ್ಟಗಳನ್ನು ಅನುಭವಿಸಿದರೆ ಮಾತ್ರ ಆನಂದ ಪಡೆಯಬಹುದು. ಇದು ಕೇವಲ ಶರೀರ ಪೋಷಣೆಯ ಆನಂದ. ಮಾನಸಿಕ ಆನಂದ ಬಹಳಮುಖ್ಯ. ಇದು ದೊರೆಯುವುದಾದರೂ ಹೇಗೆ? ಮೋಸಮಾಡಿ ಕಷ್ಟಪಟ್ಟು ದುಡಿಯದೆ ಈ ಸವಿಯನ್ನು ಅನುಭವಿಸಿದಾಗ ಅದು ಅನರ್ಥವೇ ಸರಿ. ಕೆಲವರು ಹೇಳುವುದುಂಟು ಈ ಶರೀರ ಸತ್ತನಂತರ ಭೂಮಿಯಲ್ಲಿ ಸೇರಬಹುದು ಅಥವಾ ಬೆಂಕಿಯಲ್ಲಿ ಸುಡ-ಬಹುದೆಂದು ತಿಳಿದು ಸಾಲಮಾಡಿಯಾದರೂ ತುಪ್ಪ ತಿನ್ನಬೇಕೆನ್ನುವ ಚಾರುವಾಕರ ಸಿದ್ಧಾಂತ ಧರ್ಮಕ್ಕೆ ಚ್ಯುತಿಯೇಸರಿ. ಈಶರೀರದಲ್ಲಿ ಆಗೋಚರವಾಗಿ ಸಂಚರಿಸುತ್ತಿರುವ ಶಕ್ತಿ ಮನೆಯೊಳಗಿನ ನೆಂಟನಂತೆ. ನೆಂಟರು ಬರುತ್ತಾರೆ ಮತ್ತು ಹೋಗುತ್ತಾರೆ. ಆದರೆ ಶರೀರವೆಂಬ ಮನೆಯೊಳಗಿನ ನೆಂಟ ಹೊರಟಾಗ ದೇಹ ಮಣ್ಣುಪಾಲು.

ಕನಕದಾಸರು ಹೇಳಿರುವಂತೆ:—

ಎಂಟುಗೇಣಿನ ದೇಹ ರೋಮ
ಗಳೆಂಟುಕೋಟಿ, ಕೀಲ್ಗಳರ
ವತ್ತೆಂಟು ಮಾಂಸದ ಎಲುಬುಗಳಿಂದ ಮಾಡಿದ
ಮನೆಯೊಳಗೆ ನೆಂಟನೀನಿರ್ದ
ಗಲಿದೊಡೆ ಒಣಎಂಟಿಯಲ್ಲಿ
ಮುಚ್ಚುವರೆ ಈ ದೇಹದೊಳಗೇನುಂಟು ಪುರುಷಾರ್ಥ
ರಕ್ಷಿಸು ನಮ್ಮ ನನವರತ.

ಕನಕದಾಸರು ಯಾವ ಪ್ರಯೋಗಶಾಲೆಯಲ್ಲಿ ಈ ಅಂಕಿ ಅಂಶಗಳನ್ನು ಸಂಗ್ರಹಿಸಿದರು? ನೆಂಟಯಾರು?-ಆದೇಶಕ್ತಿ. ಶಕ್ತಿಯ ಬಳಕೆ ಮುಖ್ಯ. ಆತ್ಮರಕ್ಷಣೆ ಮುಖ್ಯ. ಶರೀರ ಪೋಷಣೆ ಆತ್ಮ ಜ್ಞಾನದೊಡನೆ ಬೆರೆತಿರಬೇಕು. ಆಗಮಾತ್ರ ಧರ್ಮದೊಡನೆ ವಿಜ್ಞಾನ ಬೆರೆತು ಮೋಕ್ಷದ್ವಾರ ದೊರೆಯುತ್ತದೆ.

## ಅನುಕರಣೆಯ ಸ್ಥಾನ

ಇತ್ತೀಚಿನ ದಿನಗಳಲ್ಲಿ ಧಾರ್ಮಿಕ ಪ್ರವೃತ್ತಿಗಳೆಲ್ಲಾ ಢಂಬಾಚಾರವನ್ನು ಪಡೆದಿವೆ. ಬಾಹ್ಯ ಢಂಬಾಚಾರ ಆಂತರಿಕ ಶಕ್ತಿಗೆ ಮೆರುಗು ಕೊಡಬಹುದೇ? ರೋಲ್ಡ್ ಗೋಲ್ಡ್ ಆಭರಣ ಅಸಲಿ ಚಿನ್ನಕ್ಕಿಂತ ಮೆರುಗುಳ್ಳದ್ದು. ಕ್ರಮೇಣ ಏನಾಗಬಹುದು? ಎಲ್ಲಾ ಕಲಿಕೆಗಳೂ ಕೆಲವು ಸಂಧರ್ಭಗಳಲ್ಲಿ ಅನುಕರಣೆಯನ್ನೇ ಪಾಲಿಸುತ್ತವೆ. ಸಂದರ್ಭಗಳು ಈ ರೀತಿ ಇವೆ.

1) ಶಿಕ್ಷಕರು ಅನುಸರಿಸುವ ಮತ್ತು ಪಾಲಿಸುತ್ತಿರುವುದನ್ನೂ ವಿದ್ಯಾರ್ಥಿಗಳೂ ಅನುಸರಿಸುವುದು.
2) ತಂದೆ-ತಾಯಿಗಳ ಆಚರಣೆ ಮಕ್ಕಳನ್ನೂ ಅನುಕರಿಸುವಂತೆ ಮಾಡುವುದು.
3) ಸಂಸ್ಕೃತಿ-ಸಮಾಜದಲ್ಲಿನ ಬದಲಾವಣೆ ಅನುಕರಣೆ.
4) ಕೃಷಿಕರು, ರಾಜಕಾರಣಿಗಳು, ಸಿನೇಮಾ ನಟ-ನಟಿಯರು, ಹೆಚ್ಚಾಗಿ ಸೌಂದರ್ಯೋಪಾಸಕರು, ಬಾಹ್ಯಾಡಂಬರಗಳಲ್ಲಿ ಇವುಗಳಪಾತ್ರ ಹೆಚ್ಚು.

ಸರ್ಪಭೂಷಣ ಶಿವಯೋಗಿಗಳು ಹೇಳಿದ್ದಾರೆ:-

ಬಿಡು ಬಿಡು ಬಾಹ್ಯದೊಳು ಡಂಭವ
ಮಾನಸದೊಳು ಎಡೆಬಿಡದಿರು ಶಂಭುವ।
ಮನದೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆದರೆ ಶಿವ ನಿನಗೊಲಿಯನು ಮರುಳೆ॥

ನಿಜವಾದ ಅನುಕರಣೆ ಪ್ರಯೋಜನಕಾರಿ. ಥಳಕು ಅನುಕರಣೆ ತಾತ್ಕಾಲಿಕ. ನಮ್ಮ ಪೂರ್ವಿಕರ ನಡೆವಳಿಕೆಗಳನ್ನು ಗಮನಿಸಿದಾಗ ಅವರುಗಳ ತ್ಯಾಗದ ಫಲವೇ ನಾವು ಈಗ ಅನುಭವಿಸುತ್ತಿರುವ ಸಂಪತ್ತು. ಇತ್ತೀಚಿನ ದಿನಗಳಲ್ಲಿ ಅನಾಗರಿಕತೆಯನ್ನೇ ನಾಗರಿಕತೆ ಎಂದು ಸಾಧಿಸಲು ಹೊರಟಿರುತ್ತಾರೆ. ಸತ್ಪರಿಣಾಮ ಕಾರ್ಯಾಚರಣೆಯ ಅನುಕರಣೆಗಿಂತ ದುಷ್ಪರಿಣಾಮ ಕಾರ್ಯಾಚರಣೆಯ ಅನುಕರಣೆಯೇ ಹೆಚ್ಚು. ಇದರ ಬಗ್ಗೆ ಹೆಚ್ಚಾಗಿ ಹೇಳಬೇಕಾಗಿಲ್ಲ. ವಿವೇಕಿಗಳ ಮಾತಿನಂತೆ –We are living as a meaningless individual in this meaningless society

ಉದ್ದೇಶರಹಿತ ಕಾರ್ಯದಲ್ಲಿ ತೊಡಗಿರುವ ವ್ಯಕ್ತಿ ಇನ್ನೊಬ್ಬರನ್ನು ಕಂಡಾಗ ಅದನ್ನೇ ಅನುಸರಿಸುತ್ತಿರುವುದು ಶಿಕ್ಷಣ ಕ್ಷೇತ್ರದಲ್ಲಿ ಇದರ ಅನಾಹುತ ವಿಪರೀತ. ಶಿಕ್ಷಕರಿಗಿಂತ ಮೇಲ್ಪಟ್ಟ ಅಧಿಕಾರಿಗಳಲ್ಲೇ ತ್ಯಾಗಮನೋಭಾವ ಕಡಿಮೆ ಕಾಣುತ್ತಿದ್ದೇವೆ. ನಾವು ಬಳಸುತ್ತಿರುವ ವಿದ್ಯುತ್ತನ್ನು ನಮ್ಮ ಸುಖ ಸಂತೋಷಗಳಲ್ಲಿ ನಿರಾಯಾಸವಾಗಿ ಉಪಯೋಗಿಸುತ್ತಿದ್ದೇವೆ. ಆದರೆ ಆದನ್ನು ಹೇಗೆ ಪಡೆಯಬೇಕೆಂಬುದನ್ನು ನಮ್ಮ ಪ್ರಕೃತಿ ಸಂಪತ್ತಿನಲ್ಲಿ ದೈವೀದತ್ತವಾಗಿ ಹುದುಗಿಕೊಂಡ ಅಂಶವನ್ನು ಹೊರಗೆಡವಿದ ಸರ್.ಎಂ. ವಿಶ್ವೇಶ್ವರಯ್ಯನವರ ಜೀವನವನ್ನು ಮಾರ್ಗದರ್ಶನವಾಗಿ ಪಡೆದು ಅದನ್ನು ಅನುಕರಿಸುವ ಗೋಜಿಗೆ ಯಾರುಹೋಗಿದ್ದಾರೆ? ಇದೇ ರೀತಿ ಮಾದರಿ ಶಿಕ್ಷಕನಾಗಿ ಕಾರ್ಯನಿರ್ವಹಿಸಿ ಅವನಂತೆ ವ್ಯಕ್ತಿತ್ವ ನಿರ್ಮಾಣ ಮಾಡಲು ಅವನಲ್ಲಿರುವ ಗುಣಗಳನ್ನ ಪಾಲಿಸುವವರಾರು? ಶಿಕ್ಷಕರ ದುಷ್ಚಟಗಳು ಮಕ್ಕಳಮೇಲೆ ಜಾಗ್ರತೆ ಪರಿಣಾಮ ಬೀರುವಷ್ಟು ಒಳ್ಳೇಗುಣಗಳು ಪರಿಣಾಮ ಬೀರುತ್ತಿಲ್ಲ. ಧೂಮಪಾನ ಮಾಡುವ ಶಿಕ್ಷಕ ಮಕ್ಕಳೆದುರು ಧೂಮಪಾನಮಾಡಿ ಮಕ್ಕಳನ್ನು ಈ ಕೆಲಸ ಯಾರೂ ಮಾಡಬಾರದೆಂದು ಹೇಳುವುದು, ತಂದೆಯು ಮಗನನ್ನು ಬೀಡಿಗೆ ಬೆಂಕಿ ಹಚ್ಚಿಕೊಂಡು ಬರುವಂತೆ ಆದೇಶಿಸುವುದು, ಮಕ್ಕಳೆದುರು ತಂದೆ-ತಾಯಿಗಳು ಜಗಳವಾಡುವುದು, ಇನ್ನೂ ಅನೇಕ ಸಂದರ್ಭಗಳಲ್ಲಿ ತಮ್ಮ ತಪ್ಪನ್ನು ಮಕ್ಕಳೆದುರು ಮುಚ್ಚಿ ಬುದ್ಧಿವಾದ ಹೇಳುವುದು ಶಾಶ್ವತ ಪರಿವರ್ತನೆಗೆ ಸಾಧ್ಯವಾದುದಲ್ಲ. ಸರಿಯಾದ ಶಿಕ್ಷಣ ಕೊಡಿಸಬೇಕೆಂದು ಹಣವಂತ ಪೋಷಕರು ಹಣದಾಸೆಗಿರುವ ಶಾಲೆಗಳಿಗೆ ದಾಖಲು ಮಾಡಿಸಲು ವಹಿಸುವ ಕಾಳಜಿಯನ್ನು ಶಾಲೆ ಪ್ರಾರಂಭದಲ್ಲಿ ಕಾಣುತ್ತೇವೆ. ಸ್ಪರ್ಧಾತ್ಮಕ ಕ್ರಿಯೆಯಲ್ಲಿ ವಿಜೇತರಾದವರು ಬೆನ್ನು ತಟ್ಟಿಕೊಂಡು ಯಾರೂಸಾಧಿಸದಿದ್ದನ್ನು ತಾವೇ ಸಾಧಿಸಿದ್ದೇವೆಂದು ಸಂತೋಷ ಪಡುವ ಕಾಲವಿದು. ಮಕ್ಕಳ ಜ್ಞಾನದ ಮುಟ್ಟದ ಆಳತೆಗೋಲು ಅವರ ಶಿಕ್ಷಣ ಮುಗಿದಮೇಲೆ ಪುನಃ ತಂದೆ-ತಾಯಿಗಳನ್ನೇ ಆಶ್ರಯಿಸಿ ಜೀವನ ನಡೆಸಬೇಕೆಂಬುದನ್ನು ಮರೆತಿದ್ದಾರೆ. ಉನ್ನತ ಶಿಕ್ಷಣಕ್ಕಾಗಿ ಪರದೇಶಗಳಿಗೆ ಹೋಗಿ ಕಲಿತು ವಾಪಸ್ಸಾದ ನಂತರ ಈ ದೇಶದ ಮಹತ್ವವನ್ನು ಕೀಳಾಗಿಕಾಣುವ ಮನೋಭಾವ ವೈಜ್ಞಾನಿಕವೇ ಅಥವಾಧಾರ್ಮಿಕವೇ? ಸ್ವಾಮಿವಿವೇಕಾನಂದರು ಹೊರ ರಾಷ್ಟ್ರಗಳಲ್ಲಿ ಭಾರತದ ಹಿರಿಮೆ, ಸಂಸ್ಕೃತಿ ಮತ್ತು ಸನಾತನ ಧರ್ಮದ ಆಳವನ್ನು ಪೂರ್ಣವಾಗಿ ತೋಡಿ ತನುಮನಗಳಲ್ಲಿ ದಿಗ್ಭ್ರಾಂತಿ ಉಂಟಾಗುವಂತೆ ಮಾಡಿರುವುದನ್ನು ತಿಳಿದ ನಾವುಗಳು ಅವರ ಕೆಚ್ಚಿನ, ವೀರವಾಣಿಯಾದ "ಉತ್ತಿಷ್ಠತಾ ಜಾಗೃತ. ಗುರಿಯನ್ನು ಸೇರುವವರೆಗೂ ನೀ ಅರೆಕ್ಷಣ ನಿಲ್ಲದೆ ಮುನ್ನಡೆ ಸಖನೇ" ಎಂಬ ವಾಕ್ಯವು ಎಂತಹ ಹೇಡಿಯನ್ನೂ ಎಚ್ಚರಿಸದಿರಲಾರದು. ಇಂತಹಕಾರ್ಯದಲ್ಲಿ ನಮ್ಮ ಅನುಕರಣೆಯನ್ನು ಪ್ರಯೋಗಿಸಿದರೆ, ಒಂದಲ್ಲಾ ಒಂದು ರೀತಿ ದೇಶಸೇವೆ ಈಶ ಸೇವೆಯಾಗುತ್ತದೆ. ○

# ಬಸವತತ್ತ್ವ ರತ್ನಾಕರ—18

ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿಕಾಳಿದಾಸ", ಅಥಣಿ. (ಬೆಳಗಾವಿ ಜಿಲ್ಲೆ)

## ‹‹ಕಾವ್ಯಾನಂದ" ಶ್ರೀ ಸಿದ್ದಯ್ಯ ಪುರಾಣಿಕ: [164]

‹‹ಧ್ಯಾಮಪುರದ ಖ್ಯಾತ ಕವಿ ಶ್ರೀ ಕಲ್ಲಿನಾಥ ಶಾಸ್ತ್ರಿಗಳಾ
ಸತ್‌ಪುತ್ರ ರತ್ನರೆನೆ
ಸೋಮಕೀರ್ತಿ ಚಂದ್ರ ಶ್ರೀ ಸಿದ್ದಯ್ಯ ಪುರಾಣಿಕರ್
ಸನ್ಮಾನ್ಯ ಪ್ರಬುದ್ಧ ವ್ಯಕ್ತಿ ವಿಮಳ ಮಾನಸರೆನಲ್
ಮಲ್ಲಿಗೆಕುಸುಮ ಮೃದು ಹೃದಯಿಗಳು ನೋಡಯ್ಯಾ !

"ಕಾವ್ಯಾನಂದ ಜನ್ಮತಃ ಕವಿಗಳೆ-
ನಲಧ್ಯಾತ್ಮ ಜೀವಿಗಳು ನೋಡಯ್ಯ !
ಬೆಳಗಾವಿ ಜಿಲ್ಲೆಯಾ ಡೆ. ಕಮಿಶನರರಾಗಿ
ಕಾರ್ಯ ಗೆಯ್ದಿಹರು ಕಂಡಯ್ಯ !
ಕನ್ನಡದ ಕಡುಗಲಿಯಾಗಿ ಮೊದಲ್ ಹೈದ್ರಾಬಾದ್
ಕರ್ನಾಟಕದಿ ಕನ್ನಡ ಸಾಹಿತ್ಯ ಪರಿಷತ್ತೊಂದನು
ಸ್ಥಾಪಿಸಿರ್ದರು ಕಂಡಯ್ಯ !

ಹರಪನಹಳ್ಳಿ ಸಾಹಿತ್ಯ ಸಮ್ಮೇಲನದಿ ಇವರು
ಸಾಹಿತ್ಯಗೋಷ್ಠಿಗೆ ಅಧ್ಯಕ್ಷರಾಗಿ ಗೌರವ-
ವ್ಯಕ್ತಿಗಳೆನಿಸಿರ್ಪರು ನೋಡಯ್ಯ !

ಅಂತೆಯೆ ಮೈಸೂರು ಸಾಹಿತ್ಯ ಸಮ್ಮೇಲನದಾ
ಲೇಖಕರ ಗೋಷ್ಠಿಗೆ ಅಧ್ಯಕ್ಷರಾಗಿರ್ದರು ನೋಡಯ್ಯ !
'ಮಾನಸ ಸರೋವರ' 'ಜಲಪಾತ' ಮೇಣ್ 'ಹಾಲ್ದೆನೆ'
"ಕರುಣಾಶ್ರಾವಣ" ಮೊದಲಿಂತು ಕವನ ಕುಸುಮಂಗಳಂ
"ಕಾವ್ಯಾನಂದರು ಕನ್ನಡ ಕಾವ್ಯದೇವಿಯಾ
ಸಿರಿಮುಡಿಗರ್ಪಿಸಿಹರು ಕಂಡಯ್ಯ !
ಮತ್ತೆ 'ಸಿದ್ಧೇಶ್ವರಾಂಕಿ'ತದಿಂ ವಚನಂಗಳಂ
ಹಾಡುತಿಪ್ಪರು ನೋಡಯ್ಯ !
ಪರಮೋನ್ನತ ವಿಚಾರವಾಂತ ಸುಪ್ರಸಿದ್ಧ ವಾಗ್ಮಿಗಳಾಗಿ
ಸರ್ವಭಾಷಾ ವಿಶಾರದರಾಗಿ ಅದರಲ್ಲೂ ಆಂಗ್ಲ ಭಾಷಾಪ್ರವೀಣರಾಗಿ
ಆಧ್ಯಾತ್ಮಪ್ರಿಯರಾಗಿಪರು ನೋಡಿರಯ್ಯಾ !

ಶ್ರೀ ಸಿದ್ಧಗಂಗಾಧಿಪತಿ "ಬಸವಾವತಾರಿ" ಡಾ॥ಶ್ರೀ ಶಿವಕುಮಾರಸ್ವಾಮೀಜಿ
ಮುಂತಾದ ಹಲವಾರು ಪರಮಪೂಜ್ಯ ಶ್ರೀಗಳವರ ಹಾಗೂ ಶ್ರೀಬಸವಾದಿ
ಶಿವಶರಣರ ಪುಣ್ಯ ಕೃಪಾವಿಶೇಷವಾಂತ ಶಾಂತ ಪ್ರಶಾಂತ ವ್ಯಕ್ತಿಕಂಡಯ್ಯ
ಶ್ರೀ 'ಕಾವ್ಯಾನಂದ'ರ ವಿದ್ವತ್ಪೂರ್ಣಕೃತಿ "ಶರಣಚರಿತಾಮೃತ"
ಕಾಣಾ, ಕಲಿಯುಗದ ಶ್ರೀದೇವಸ್ಥಾನ-ಶ್ರೀಶೈಲ ಮಲ್ಲಿಕಾರ್ಜುನ!"

**'ಕನ್ನಡಕವಿಕಾಳಿದಾಸ' ಶ್ರೀನೋಟಗಿ ಮಲ್ಲಿಕಾರ್ಜುನ** [165]

"ತಂದೆಯೆನೆ ಚೆನ್ನಬಸಪ್ಪ ತಾಯಿ ಭದ್ರಮ್ಮನೆನಲು
ಬಂದಿವರ ಗರ್ಭದಲಿ ನಿಂದು "ಮಲ್ಲಿಕಾರ್ಜುನಂ" ಮತ್ತೆ ಜನಿಸೆ
ಚೆಂದದಿಂ "ಮುರುಘ ಶಿವಯೋಗಿ" ಗುರುಕರುಣಾಮೃತ ಹಸ್ತದೊಳು
ಮುಂದಿಳೆಗೆ "ಕನ್ನಡಕವಿಕಾಳಿದಾಸ"ನೆಂದು ಖ್ಯಾತನಾಮವಾಯಿತ್ತು ನೋಡಾ!
1)ಲಿಂಗವಿಲಾಸ (ಸತ್ಕಾವ್ಯ ಸೌರಭ) 2)ಅನ್ತಃಪುರಗೀತೆ (ಹೃದಯಗಳವಿಕಸನಕಾವ್ಯ
3)ಆತ್ಮಸ್ವಾತಂತ್ರ್ಯ (ಜ್ಞಾನದರ್ಶನಕಾವ್ಯ) 4) ಧರ್ಮರಹಸ್ಯ (ಜ್ಯೋತಿರ್ಮಯಕಾವ್ಯ
5) "ಶಿವಾನುಭಾವ ದರ್ಪಣ" (ಮೋಕ್ಷಚಿಂತಾಮಣಿಕಾವ್ಯ) ಇಂತೀ ಚಂಪೂಗ್ರಂಥಯ
ಪಂಚ ಕಾವ್ಯರತ್ನಂಗಳು ರಚಿತವಾದುವು ನೋಡಾ!
ದೇವದೂತ(ಮೂಲೋಕರಹಸ್ಯನಾಟಕ)ಮೇಣ್ ದಿವ್ಯವಾಣಿ ವಿಶ್ವಧರ್ಮತತ್ತ್ವಬೋಧೆ
ಮುಂತಾದ ಕೃತಿಗಳುತ್ಪತ್ತಿಯಾದುವು ನೋಡಾ! ಮತ್ತೆ ಶಿವಯೋಗಿ ಸತ್ಪುರುಷರಾ
ಗದ್ಯಪದ್ಯಾತ್ಮಕ ಚಾರಿತ್ರ್ಯಕೃತಿ ಮತ್ತೆ ಬಂದಿತು ನೋಡಾ! ವೀರಶೈವ ವಿಭೂತಿಗಳೆಂದು
"ದೇವಪುರುಷರ ಚರಿತ್ರಾಮೃತ" ಮಹಾಪುರುಷರ ಚರಿತ್ರೆಗಳು"
(ಎಂಬೆರೆಡು) ಸಹಸ್ರ ತ್ರಿಪದಿಯುಕ್ತ
ಕೃತಿರತ್ನಗಳು ಬೆಳಗುತ್ತ ನಿಂದಿಹವು ನೋಡಾ!
"ಧರ್ಮಜ್ಞ" ಕವಿಯ ಸಹಸ್ರದ್ವಯ ಕೃತಿರತ್ನಗಳು 12.
'ಸುದರ್ಶನ ಚಕ್ರ, ಮೆಂಬೀ "ಧರ್ಮಜ್ಞ ಕವಿ"ಯ
ಧರ್ಮಸೂತ್ರ ಮೂಲ ಛಂದಸ್ಸಿನಾ ಕಾವ್ಯಂಗಳಿವು.
ಇಂತಿವೆಲ್ಲ ಶಿವಶರಣಸಾಹಿತ್ಯ ವಚನ ವಾಙ್ಮಯ ಸಹಿತವಾಗಿ
ಶ್ರೀಬಸವ ಕೃಪೆಯಿಂ ಬಂದುವು ನೋಡಾ!
ಮತ್ತೆ "ಪುರುಷಸೂಕ್ತ" ಋಷಿಸಾಹಿತ್ಯಾವಲೋಕನ ವಿಮರ್ಶಕೃತಿ,
"ಬಸವತತ್ತ್ವರತ್ನಾಕರ" (ವಚನಕಾವ್ಯಕೃತಿರತ್ನ)
"ಬಸವರಾಜದರ್ಶನಂ (ಮಹಾಛಂದಸ್ಸಿನ ಮಹಾಕಾವ್ಯ)
ಕಲಿಯುಗದ ಕಾಮಧೇನು, ಪೃಥ್ವಿಯಪುರುಷಮಣಿ ಶಿರ್ಡಿಸಾಯಿದರ್ಶನ
(ದಿವ್ಯಭವ್ಯ ಚರಿತ್ರಾಮೃತಗದ್ಯ) ಇಂತೀ ಕೃತಿರತ್ನಂಗಳಂ
ಶರಣಪ್ರಭು-ಬಸವಾದಿಗಳ ಕರುಣೆಯಿಂದಿತ್ತನಲ್ಲದೆ

"ಕನ್ನಡಕವಿಕಾಳಿದಾಸಂ"ಗೆ ನಾನೆಂಬುದಿಲ್ಲವಯ್ಯಾ! ಶ್ರೀಮೋಟಗಿ ಮಲ್ಲಿಕಾರ್ಜುನ
ಬಸವಾದಿ ಶರಣರನುಯಾಯಿ ಶ್ರೀಬಸವಣ್ಣನಾಣತಿಯಿಂ ಭುವಿಗೆ ಬಂದಪನು ನೋಡಾ!
ಜೀವಕೋಟಿ ಕಾರುಣ್ಯಹೃದಯ, ವಿಶ್ವಕಲ್ಯಾಣಿ, ಮನುಕುಲೋದ್ಧಾರ ಧ್ಯೇಯಧ್ಯಾನಿ!
ಸಕಲ ಬ್ರಹ್ಮಾಂಡಗಳ ರಕ್ಷಿಸಬಲ್ಲ ಮಹಾಂತ ಮಹಾದೇವ ಕೀರ್ತಿ!
ಸಲ್ಲಲಿತ ಮಹಾಲಿಂಗಮೂರ್ತಿ ಶ್ರೀಶೈಲಮಲ್ಲಿಕಾರ್ಜುನನಲ್ಲದೆ ಬೇರಿಲ್ಲ ಕಾಣಿರಯ್ಯ!

**ಪಂಚಕಾವ್ಯಗಳ ಬಗೆಗೆ ॥ವಂಶಸ್ಥವೃತ್ತಂ॥**

ನಿಸರ್ಗ ಜಾತಪ್ರತಿಭಾತಿ ಭಾಸುರೋ!
ಥಣೀಸ್ಥಿತೋ ಮೋಟಗಿ ಮಲ್ಲಿಕಾರ್ಜುನಃ।
ಅಯಂ ವ್ಯತಾನೀನ್ನವ ಕಾವ್ಯಪಂಚಕಂ।
ಸುಲಿಂಗ ಲೀಲಾದ್ಯಭಿಧಾನ ಸಂಯುತಂ॥
ಮಯಾ ವಿಮೃಷ್ಟಂ ಖಲುಕಾವ್ಯ ಪಂಚಕಂ।
ಕವಿಪ್ರಣೀತ್ಯಂ ಭವತೀತಿ ವೇಧ್ಮ್ಯಹಂ।
ಇದಂ ವಚೋ ಮಾಮಕವಔಪಚಾರಿಕಂ।
ನ ಜಾಯತೇ ಜಾತ್ವಪಿ ಸತ್ಯಮೇವಹಿ॥

**"ಗಮಕ ಕಲಾನಿಧಿ" ಜೋಳದರಾಶಿ ದೊಡ್ಡನಗೌಡ-166**

ಜೋಳದರಾಶಿ ದೊಡ್ಡನಗೌಡ
ನುಡಿಮುತ್ತಿನ ರಾಶಿಗೆಯ್ದ ನೋಡ!
ಮೇಳವಿಸಿ ಶರಣ ಸಂತರ ಪಾತ್ರಗಳಂ
ಅಭಿನಯಿಸಿ ಸುಂದರ ನಟನಾದ ನೋಡಾ!
ಪುಣ್ಯ ಚರಿತಂಗಳನು ನಾಟಕವಾಗಿ ರಚಿಸಿ
ಗಣ್ಯ ಕವಿಪುಂಗವನಾದ ನೋಡಾ!
ಕಾವ್ಯ ಪುರಾಣಂಗಳನೋದಿ ಹೇಳಿ 'ಗಮಕ ಕಲಾನಿಧಿ"
ಪ್ರವಚನ ಪಟುವಾದ ನೋಡಾ!
'ಶೂನ್ಯ ಸಂಪಾದನೆ"ಯಂ ಸುಶ್ರಾವ್ಯಗಾನದಿಂ
ಪಾಡಿ ವಿಸ್ತರಣಗೆಯ್ದು ದೊಡ್ಡನಗೌಡ ಬಹುಶ್ರುತ
ಕಲಾವಿದನಾಗಿ ನಾಡಜನಮನ ಸೂರೆಗೆಯ್ದ ನೋಡಾ!
"ರಸವರ್ಷ" ಕೃತಿಯನಿತ್ತ ಕವಿ ಜೀವಿತದ ಕ್ಷಣಗಳನೆಲ್ಲ
ರಸಹರ್ಷ ವರ್ಷಂಗಳನಾಗಿಸಿ ಕಳೆದ ರಸಜ್ಞಕವಿ ನೋಡಾ!
ಎಮ್ಮ ಮನೆಗೆ ಹರ್ಷದಿಂದೈತಂದ ಜೋಳದರಾಶಿ ದೊಡ್ಡನಗೌಡ
ಆತ್ಮ ಬಂಧು "ಕನ್ನಡ ಕವಿ ಕಾಳಿದಾಸ" ಪ್ರೇಮಿ ಪರಿಶುದ್ಧ ಹೃದಯಿ ನೋಡ!
"ನಿಮ್ಮನು ಕಂಡರೆ ಸಾಕು! ಅದೆ ಸಂತೋಷವೆನ್ನುವರು ನೋಡಾ!

ಜನವರಿ-1993

ಬಳ್ಳಾರಿಯ ಸರ್ವದರ್ಶನ ತೀರ್ಥ ಶಿವಕವಿ ಪಂಡಿತ ಶ್ರೀ-
ವೈ. ನಾಗೇಶ ಶಾಸ್ತ್ರಿಗಳವರ ಪ್ರೀತಿಪಾತ್ರ ವ್ಯಕ್ತಿ ನೋಡಾ !
ಧಾರವಾಡದ ಪರಮಪೂಜ್ಯ ಮೃತ್ಯುಂಜಯಪ್ಪಗಳ ಅಂತೆಯೇ
ಮಹಾಂತಪ್ಪಗಳ ಕೃಪಾ ಪಾತ್ರ ನೀತ ನೋಡಾ !
ಹಾಗೆಯೇ ಉಭಯ ಶ್ರೀಗಳವರ ಜೊತೆಯಲ್ಲಿ "ಶ್ರೀ ಮಲ್ಲಾಬಾದಿ ವೀರಭದ್ರಪ್ಪ"
ಮತ್ತು 'ಧರ್ಮಜ್ಞಕವಿ' ಇತ್ಯಾದಿ ಕಲಾವಿದ ಪಂಡಿತ ಶಾಸ್ತ್ರಿಗಳು ಸಹಿತ, ದೂ
ದೂರದ ನಾಡಿನ ಚರಮೂರ್ತಿಗಳ ಸಂಗಮದಿ ಶಿವಾನುಭವ ಪ್ರವಚನವುಸಾಗಿ
ಭಕ್ತ ಹೃದಯಗಳೆಲ್ಲ ತಣಿದು ಹರ್ಷಾಬ್ಧಿಯಲ್ಲಿ ಮುಳುಗೇಳು ತಿದ್ದವು ನೋಡಾ!
ನಿಪ್ಪಾಣಿ-ಬೈಲ ಹೊಂಗಲ-ಕಟಕೋಳ ಮೊದಲಾದ ಊರ ಭಕ್ತರು
ಪುಣ್ಯಜೀವಿಗಳು ನೋಡಾ
ಇಂತು ಗಮಕ ಕಲಾನಿಧಿ, ಜೋಳದರಾಶಿ ದೊಡ್ಡನಗೌಡಾ ಪುಣ್ಯಕೀರ್ತಿ ಚೇಳ್
ಗುರ್ಕಿ ಎರ್ರಿತಾತರ
ದಿವ್ಯ ಕೃಪಾಪುತ್ರ ಮಹಾನುಭಾವ ನೋಡಾ ! ಶ್ರೀ ಶೈಲಮಲ್ಲಿಕಾರ್ಜುನ!

### ಶ್ರೀ ಸಂಗಮೇಶ ಹೊಸಮನಿ: [167]

"ಸಂಗಮನಾಥನ ಸದ್‌ಭಕ್ತ ಸಂಗಮೇಶ ಹೊಸಮನಿ
ಶ್ರೀ ಸಂಗಮನಾಥನ ವಚನಗಳ ಹಾಡುತಿಪ್ಪರು ನೋಡಾ !
ಸರಳ ಸಾತ್ವಿಕ ವ್ಯಕ್ತಿ ಸದುಹೃದಯಿಯೆನೆ ಸಂಗಮೇಶ
ಹುನಗುಂದ (ಹೊನ್ನುಗುಂದ) ಪ್ರಾಥಮಿಕ ಶಾಲೆಯೊಳು
ಶಿಕ್ಷಕರಾಗಿಪ್ಪರು ನೋಡಾ !
ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು
ಕನ್ನಡ ಪ್ರಸಿದ್ಧ ಮಾಸಪತ್ರಿಕೆ "ಶರಣ ಸಾಹಿತ್ಯ"ಕ್ಕೆ ಕಾವ್ಯ
ಮಹಾಪುರುಷರ ಚರಿತ್ರೆಗಳ, ಮೇಣ್ ಆಧ್ಯಾತ್ಮಿಕ ಲೇಖನಾದಿ, ನಾಟಕ,
ಪ್ರಬಂಧ ಮೊದಲಾದುವುಗಳನ್ನು ಬರೆಯುತ್ತ ಕನ್ನಡನಾಡಿನ
ಖ್ಯಾತ ಲೇಖಕರಪ್ಪ "ಕನ್ನಡ ಕವಿಕಾಳಿದಾಸ"ರಾ
ನಲ್ಮೆಯ ಸ್ನೇಹಿತರಾಗಿ 'ಶರಣಸಾಹಿತ್ಯ'ಕ್ಕೂ
ಆಗಾಗ ಕವನಗಳನ್ನು ಬರೆಯುವರು ನೋಡಾ !
'ಮೊಗ್ಗುಮಾಲೆ' 'ಪುಷ್ಪಗುಚ್ಛ'ಗಳೆಂಬೆರೆಡು
ಕವನ ಕೃತಿಗಳನು ಕೈಪಿಡಿಯಂತೆ ಕನ್ನಡಿಗರ ಕೈಗಿತ್ತಿಹರು ನೋಡಾ !
ಮೈಸೂರು ಸರ್ಕಾರವೇರ್ಪಡಿಸಿದಾ ಕವಿತಾ ಸ್ಪರ್ಧೆಯಲಿವರು
ಪ್ರಥಮ ಪಾರಿತೋಷಕವನು ಪಡೆದಿಹರು ನೋಡಾ !

ಸಂಗಮೇಶರ ಶಿಶುಕವನ ಸಂಕಲನ 'ಲೋಲಬಗರಿ'
ಮಕ್ಕಳ ಮೆಚ್ಚುಗೆಯ ಕೃತಿಯಾಗಿಹುದು ನೋಡಾ.
ಜಗವಿಖ್ಯಾತ ಪಾಂಡಿಚೆರಿಯ ಶ್ರೀಮಾತಾರವಿಂದರ ಆಧ್ಯಾತ್ಮ(ಮಹರ್ಷಿ)
ತತ್ತ್ವಪ್ರಿಯರಾದ "ಧರ್ಮಜ್ಞಕವಿಯು" ಪೋಲ್
ಭಕ್ತಿವಿಶ್ವಾಸಗಳನಿರಿಸಿಕೊಂಡು ಸಾಗಿಹರು ನೋಡಾ! ಸಂಗಮೇಶ!
ಹೆಚ್ಚಾಗಿ ಶ್ರೀಮಾತಾರವಿಂದರ ಭಕ್ತಪ್ರಿಯ ಶ್ರೀಚನ್ನಮಲ್ಲಪ್ಪ ಹಲಸಂಗಿ,
ಶ್ರೀ ಶಿಂಪಿಲಿಂಗಣ್ಣ ಮೊದಲಾದ ಹಿರಿಯ ಖ್ಯಾತ ಸಾಹಿತಿಗಳಂತೆ,
ಶ್ರೀ ಸಂಗಮೇಶರೂ ಶ್ರೀಅರವಿಂದರ ಬಗೆಗೆ ತಮಗೆ ತಿಳಿದಷ್ಟು ಹೊಳೆದಷ್ಟು
ಭಕ್ತಿಪೂರ್ವಕವಾಗಿ (ಬರೆಯುತ್ತ) ನುಡಿಯುತ್ತ ನಡೆಯುತ್ತಲಿಹರು ನೋಡಾ!
ಮನೆನೋಡಾ ಬಡವರು ಮನನೋಡಾ ಸಿರಿವಂತರು, ಎಂಬೀಶರಣರಾಚರಣೆಯಂತೆ
ಕವಿಸಂಗಮೇಶ ಸದಾಚಾರಿಗಳಾಗಿ ಬಾಳನೌಕೆಯ ಸಾಗಿಸುತ್ತಿಹರು ನೋಡಾ!
ಭಾಪೂರ್ಣ ಸರಸ ಸಾಹಿತಿಯಾಗಿ ಸಂಗಮೇಶಕವಿ ಇಂದಣ ವಚನಕಾರ-
ರೆನಿಸಿರ್ಪರು ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ !

## ಸಿರಿಗನ್ನಡಂ ಗೆಲ್ಗೆ

ಸಿದ್ಧಯ್ಯಪುರಾಣಿಕ, "ಶ್ರೀಗಿರಿ" 4/5ಎ, ಆಲಿ ಅಸ್ಕರ್ ರಸ್ತೆ, ಬೆಂಗಳೂರು-1

ಇದು ಧ್ವನಿಸುರುಳಿಗಳ ಸುಗ್ಗಿಯಕಾಲ. ಸಹಜವಾಗಿಯೇ ವ್ಯಾಪಾರೀ ಮನೋಭಾವ ಅಲ್ಲಲ್ಲಿ ಇಣಿಕಿದೆ. ಇದಕ್ಕೆ ಒಳಗಾಗದೆ ಒಳಗಿನ ಒಳದನಿಗೆ ಕಿವಿಗೊಟ್ಟು, ಶುದ್ಧ ಶ್ರದ್ಧೆಯಿಂದ ಪ್ರೇರಿತರಾಗಿ, ಸಂಗೀತ ಸಾಧನೆಯನ್ನೇ ಗುರಿಯಾಗಿರಿಸಿಕೊಂಡು ಧ್ವನಿ ಸುರುಳಿಗಳನ್ನು ನೀಡಿದವರು ವಿರಳ. ಆ ವಿರಳರ ಸಾಲಿನಲ್ಲಿ ಶೋಭಿಸುತ್ತಿರುವವರು ಸೋದರಿ ಜಯಾ ರಾಜಶೇಖರ ಅವರು.

ಇವರ ವ್ಯಕ್ತಿತ್ವದಲ್ಲಿ ಸಾಹಿತ್ಯ, ಸಂಗೀತ, ಸೃಜನ ಶೀಲತೆಗಳು ಸಂಗಮಿಸಿವೆ-ಹೃದಯಂಗಮವಾಗಿ, ಅಂತೆಯೇ ಇವರು ಶೂನ್ಯ ಸಂಪಾದನೆಯ ಉಜ್ವಲ ಅಧ್ಯಾಯ "ಅಕ್ಕಮಹಾದೇವಿಯ ಸಂಪಾದನೆ"ಗೆ ತಾವೇ ಸಂಗೀತ ಅಳವಡಿಸಿ, ತಮ್ಮ ಶಾಸ್ತ್ರ ಸಂಯುತ ಸುಮಧುರ ಕಂಠದಿಂದ ಹಾಡಿ ನೀಡಿರುವ ಎರಡು ಧ್ವನಿ ಸುರುಳಿಗಳು ಸದಾ ಹಸಿರಾಗಿ ಉಳಿದಿರುವ (ever green) ಕಲಾ ಪ್ರಪೂರ್ಣ ಸುರಳಿಗಳಾಗಿವೆ.

ಇವುಗಳನ್ನು ಕೇಳುತ್ತಿದ್ದಂತೆ ಅಕ್ಕಮಹಾದೇವಿಯ ಮಹೋಜ್ವಲ ವ್ಯಕ್ತಿತ್ವ ಇನ್ನೂ ಉಜ್ವಲವಾಗಿ ಬೆಳಗುತ್ತದೆ. ಆ ಬೆಳಕಿನಲ್ಲಿ ನಮ್ಮ ಹಮ್ಮಿನ ತಮ ಕರಗಿ, ಅದೂ ಬೆಳ್ದಿಂಗಳಾಗಿ ಹೊಳೆಯುತ್ತದೆ.

ಸೋದರಿ ಜಯಾ ರಾಜಶೇಖರರ ಈ ಕೊಡುಗೆಗಾಗಿ-ಕೃತಜ್ಞತಾ ಭಾವ ಮೊಳೆ-ಯುತ್ತದೆ. ಇವರಿಂದ ಶೂನ್ಯ ಸಂಪಾದನೆಯ ಇನ್ನುಳಿದ ಸಂಪಾದನೆಗಳೂ ಧ್ವನಿ ಸುರುಳಿಗಳಾಗಿ ಹೊರ ಬರಲೆಂಬ ಹಾರೈಕೆ ತಾನೇ ತಾನಾಗಿ ಹೊರ ಹೊಮ್ಮುತ್ತದೆ.

ಬಸವಾದಿ ಪ್ರಮಥರು ಈ ಸೋದರಿಗೆ ಇದನ್ನು ಈಡೇರಿಸುವ ಛಲವನ್ನೂ, ಬಲವನ್ನೂ ಆಯುರಾರೋಗ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

# ಭಾರತ ಸಂಸ್ಕೃತಿ ಶಾಶ್ವತ

ನಡೆ ನೂರಿರಲಿ
ನುಡಿ ನೂರಿರಲಿ
ನಡೆ ನುಡಿಗೆ ಮೂಲ ಭಾರತ
ಬೆಳಗಲಿ ಸಂಸ್ಕೃತಿ ಅನವರತ!

ನದಿ ನೂರಿರಲಿ
ನದ ನೂರಿರಲಿ
ನದಿ ನದಗಳ ನೆಲೆ ಭಾರತ
ಉಳಿಯಲಿ ಸಂಸ್ಕೃತಿ ಜೀವಂತ!

ಜನ ಎನಿತಿರಲಿ
ಮನ ಎನಿತಿರಲಿ
ಜನಮನ ಸಂಪದ ಭಾರತ
ಭಾರತ ಜನಪದ ಜೀವಂತ!

ತರು ಎನಿತಿರಲಿ
ಲತೆ ಎನಿತಿರಲಿ
ತರುಲತೆ ಹಸಿರನು ಬೀರುತ
ಭಾರತ ಕಾನನ ಅಗಣಿತ!

ವೇಷವೇನೇ ಇರಲಿ
ಭೂಷವೇನೇ ಇರಲಿ
ವೇಷಭೂಷ ತೋರಿದೆ ಭಾರತ
ಭಾರತ ಸಾರಿದೆ ಏಕತಾ!

ಕುಲವೇನೇ ಇರಲಿ
ಫಲವೇನೇ ಇರಲಿ
ನಮ್ಮ ಬಲ ಅಖಂಡ ಭಾರತ
ಭಾರತ ಅಭಿಮತ ಒಮ್ಮತ!

ಧರ್ಮವೇನೇ ಇರಲಿ
ಕರ್ಮವೇನೇ ಇರಲಿ
ಧರ್ಮ ಕರ್ಮ ಸಂಯೋಗ ಭಾರತ
ಭಾರತ ಸಂಸ್ಕೃತಿ ಶಾಶ್ವತ!

—ಕೃಪೆ: ತರುಣ, ಭಾರತಿ ವಿಶ್ವಸ್ಥಮಂಡಳಿ, ಭದ್ರಾವತಿ.

# ಮಾನವ ಜನ್ಮ ದೊಡ್ಡದು

—ಎನ್ಕೆ ಕುಲಕರ್ಣಿ "ಮಾತೃಶ್ರೀ" ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ.

ಹೌದು 'ಮಾನವ ಜನ್ಮ ದೊಡ್ಡದು' ಆದರೆ ಎಷ್ಟು ಜನರಿಗೆ ಇದರ ಪ್ರಜ್ಞೆ ಇದೆ? ಎಲ್ಲರೂ ಹುಚ್ಚಪ್ಪಗಳಂತೆ ಇದನ್ನು ಹಾಳು ಮಾಡುವವರೆ. ಒಂದು ಕ್ಷುಲ್ಲಕ ಸ್ವಾರ್ಥಕ್ಕಾಗಿ ಇನ್ನೊಬ್ಬನ ತಲೆಯನ್ನು ತೆಗೆಯುವುದೆಂದರೆ ಸವತೆ ಕಾಯಿಯ ತುಂಬು ಸವರಿದಷ್ಟು ಸುಲಭವಾಗಿ ಹೋಗಿದೆ. ಇಂದಿನ ಸಾರಾಸಾರ ವಿಚಾರ ಶೂನ್ಯ ಜಗತ್ತಿನಲ್ಲಿ! ಲೈಂಗಿಕ, ಪಾಶವೀಕೃತ್ಯಕ್ಕಾಗಿ, ರಾಜಕೀಯ ಸ್ವಾರ್ಥ-ಸ್ವಪಕ್ಷ ಸಾಧನೆಗಾಗಿ, ದುಡ್ಡಿನ ಪೈಶಾಚಿಕ ಪ್ರಾಪ್ತಿಗಾಗಿ, ನೆಲಕ್ಕಾಗಿ-ಮಣ್ಣಿಗಾಗಿ, ಒಪ್ಪೇನು ಹೆಣ್ಣಿಗಾಗಿ, ಹೊನ್ನಿಗಾಗಿ, ಮಣ್ಣಿಗಾಗಿ ತಲೆಗಳು ಉರುಳುತ್ತವೆ. ಇಂದಿನ ಕಾಲ-ಮಾನ ಪರಿಸರದಲ್ಲಿ ಅದು ಉಗ್ರವಾದಿಗಳ ಸ್ವರೂಪ ತಳೆಯಬಹುದು, ಯುವಕರ ಬಂಡಾಯ ಕ್ರಾಂತಿಯ ರೂಪತಳೆಯಬಹುದು, ಶೋಷಣೆಯ ವಿರುದ್ಧ ಸೇಡಿನ ಸ್ವರೂಪ ತಾಳಬಹುದು.

ಮಹಾಭಾರತ ಯುದ್ಧ ಹೊಗೆದೋರಿ ಹಗೆತನವು ನೆತ್ತರದ ಯಜ್ಞವಾಗಿ ಸರ್ವನಾಶ ದುರಂತಕ್ಕೆ ಕಾರಣವಾದುದು ಯಾತರಿಂದ? ಒಂದು ಅಸೂಯೆಯಿಂದ. ಕೌರವರು ಪಾಂಡವರ ಧರ್ಮಬದ್ಧ ಏಳ್ಗೆಯನ್ನು ಸಹಿಸದಾದ, ಆತನಲ್ಲಿ ಅಸೆಯೆ ಮನೆಮಾಡಿ ಆತನನ್ನೆ ನೆಲಕ್ಕೆ ಮೆಟ್ಟಿತು. ಮಾನವ ತನ್ನ ಒಂದು ಆಸುರೀ ಅಸೂಯೆಯನ್ನು ಗೆಲ್ಲದಿದ್ದರೆ ಎಂತಹ ಅನಾಹುತ! ಮಾನವಜನ್ಮದೊಡ್ಡದು. ಇಂತಹ ಅಸೂಯೆಯನ್ನು ಗೆಲ್ಲಬೇಕು. ಮೂರು ಗುಣಗಳನ್ನು ಗೆದ್ದು ಮಾನವ ಅ-ತ್ರಿ ಆದಾಗ ಮಾತ್ರ ಅನಸೂಯೆ ಆತನ ಕೈಹಿಡಿಯುವವಳು. ಇವರಿಬ್ಬರ ದಾಂಪತ್ಯ ಸಂತಾನವಾಗಿ ದತ್ತಾತ್ರೇಯ ಅವತರಿಸುತ್ತಾನೆ.

ಮಾನವ ಜನ್ಮ ದೊಡ್ಡದು ಎಂಬುದನ್ನು ಮೊದಲು ತಿಳಿಯಬೇಕು. ಮಾನವ ದೌರ್ಬಲ್ಯಗಳನ್ನು ಸೀಮಿತಗಳನ್ನು ಮೊದಲು ಗೆಲ್ಲಬೇಕು. ರಾಮಾಯಣದ ಸೀತೆಗೆ ಸ್ವರ್ಣಮೃಗದ ಮಾಯೆಯನ್ನು ಗೆಲ್ಲಲಾಗಲಿಲ್ಲ. ಈ ಜೀವಾತ್ಮನಲ್ಲೂ ಸೀತೆಯ ಸೀಮಿತತೆ. ಅಂತೆಯೆ ಶ್ರೀರಾಮನಿಂದ ಅಗಲಿದ ಸೀತೆಯಂತೆ ಜೀವಾತ್ಮರು ಮಾಯಾ ಬದ್ಧನಾಗಿ ಪರಮಾತ್ಮನನ್ನು ಅಗಲುತ್ತಾನೆ. ಆಗ ಪ್ರಾಣದೇವರಂತಹ ಹನುಮಾನ್ ಆಚಾರ್ಯ ಪುರುಷನ ಸಹಾಯದಿಂದ ಮತ್ತೆ ಜೀವಾತ್ಮ ಪರಮಾತ್ಮರ ಸುಯೋಗ, ಸಹಯೋಗ ಸಾಧ್ಯವಾಗುತ್ತದೆ. ಜಡ ಪ್ರಜ್ಞೆಯು ದಿವ್ಯ ಪ್ರಜ್ಞೆಯ ಮಟ್ಟಕ್ಕೆ ಆರೋಹಿಸಬೇಕಾದರೆ ಮಾನವ ಜನ್ಮ ಒಂದು ಮಧ್ಯವರ್ತಿ ಸೇತುವೆಯಂತೆ ಮಾನವ ಜನ್ಮ ದೊರೆತಾಗ ಅದರ ಆಲಂಬನದಿಂದ ದಿವ್ಯತ್ವಕ್ಕೆ ಏರಬೇಕು. ಹಾಗಾದರೆ

ಮಾನವನು ದೊಡ್ಡವನಾಗಿ ಬೆಳೆಯುವುದು ಹೇಗೆ? ಕನ್ನಡ ಪ್ರಹಸನ ಪಿತಾಮಹ ಕೈಲಾಸಂ ತಮ್ಮ ಟೊಳ್ಳು-ಗಟ್ಟಿಯಲ್ಲಿ ಒಂದು ಮೌಲಿಕವಾದ ಮಾತು ಹೇಳಿದ್ದಾರೆ. ಭಗವಂತನು ಕೊಟ್ಟ ಭೂಮಿಯ ಮೇಲೆ ವಾಸವಾಗಿರೋದಕ್ಕೆ ನಾವು ಆತನಿಗೆ ಕೊಡ-ಬೇಕಾದ ಬಾಡಿಗೆ ಅಂದರೆ ನಮ್ಮ ನೆರೆ ಹೊರೆಯುವರಿಗೆ ನೆರವಾಗೋದು, ಕಷ್ಟದಲ್ಲಿರುವ ನಮ್ಮ ನೆರೆಹೊರೆಯುವರಿಗೆ ನಾವು ಯಾವ ರೀತಿ ನೆರವಾಗುತ್ತಿದ್ದೇವೆ? (ನಮ್ಮ ನೆರೆಯ ದೇಶಗಳು ನಮಗೆ ಯಾವ ರೀತಿ ಉಪಯೋಗವಾಗುತ್ತಿವೆ? ಉಪದ್ರವ ಕೊಡುವುದೆ ಅವರು ನಮಗೆ ನೀಡುವ ನೆರವೆ?) ಒಂದು ಓಣಿಯಲ್ಲಿ, ಒಂದು ಊರಲ್ಲಿ ಉತ್ತಮ ನೆರೆ ಹೊರೆಯನ್ನು ನಿರ್ಮಿಸಿಕೊಳ್ಳುವುದು ನಮಗೆ ಗೊತ್ತಿಲ್ಲ.

'ನೋವವರೊಳನು ತಾಪವೆ ಕಾವ್ಯಕೆ ಮೊದಲ ಮಂಗಳ' ಎಂದು ಕವಿ ಶ್ರೀನಿವಾಸರು ಹೇಳಿದರು. ಕಾವ್ಯಕಷ್ಟೆ ಏಕೆ? ಜೀವನಕ್ಕೂ ಮೊದಲ ಮಂಗಳ ಯಾವುದು ಎಂದರೆ ನೋವವರಲ್ಲಿ ಅನುತಾಪವನ್ನು ತಾಳುವುದು. ಅನುತಾಪವನ್ನು ತಾಳಿ ಕೈಲಾದ ಮಟ್ಟಿಗೆ ನೆರವಾಗುವುದು.

ನೆರೆ ಹೊರೆಯವರು ಸೋದರರರಂತಿರುವ ಮಾತು ಬಹಳ ದೊಡ್ಡದು. ಕನಿಷ್ಟ ನೆರೆ ಹೊರೆಯುವರು ಒಬ್ಬರಿಗೊಬ್ಬರು ಕೌರವ-ಪಾಂಡವರಂತೆ ಇರದಿದ್ದರೆ ಸಾಕು. ಜೀವನದಲ್ಲಿ ಮೌಲ್ಯಗಳು ಎಂದಿರುತ್ತವೆ. ಸತ್ಯವನ್ನು ನುಡಿದು ಸತ್ಯವನ್ನು ನಡೆಯುವುದು ಒಂದು ಮೌಲ್ಯ. ಮಾನವ ಧರ್ಮವನ್ನು ಆಚರಿಸುವುದು ಒಂದು ಮೌಲ್ಯ.

'ಮಾನವ ಕುಲಂ ತಾನೊಂದೆವಲಂ' ಎಂದು ಸಾರಿದ ನಮ್ಮ ಆದ್ಯ ಕವಿ ಪಂಪ ದೊಡ್ಡವ. ದೊಡ್ಡಮಾತನ್ನು ಹೇಳಿ ಹೋದ. "ಸೆಕ್ಯುಲರ್" ಎನ್ನುತ್ತವೆ. ಜಾತಿ-ಜಾತಿಗಳಲ್ಲಿ ಹೊಗೆ ಎಬ್ಬಿಸಿ, ಹಗೆಹಬ್ಬಿಸಿ, ಮನೆ-ಮನೆಗೆ ಬೆಂಕಿ ಇಡುವ ಅಮಾನುಷ ಕೃತ್ಯಗಳಲ್ಲಿ ತೊಡಗುವುದು ಯಾವ ಮಾನವೀಯತೆ?

"ಮಾನವ ಜನ್ಮ ದೊಡ್ಡದು" ಯಾವಾಗ? ಜಾತಿ-ಜಾತಿ ಎಂಬ ಬಡ-ಬಡಿಕೆ ಹೋಗಿ, ಪ್ರೀತಿ, ಪ್ರೀತಿ ಎಂಬ ನೆರೆ ಹೊರಿಕೆ ನಿರ್ಮಾಣ ಗೊಂಡಾಗ.

# ಮಾನಸಿಕ ಶಕ್ತಿಗಳು

ಡಿ. ಎಂ. ಬಡಿಗೇರ, ನಿವೃತ್ತ ಶಿಕ್ಷಕರು, ನಂ. 34, ಗೋಕುಲ, ಹುಬ್ಬಳ್ಳಿ.

## ಪ್ರಾಣಾಯಾಮದ ೨ನೇ ಹಂತ

ಕ್ರಮಸಂಖ್ಯೆ:-೨ ಒಳಗೆ ಉಸಿರನ್ನು ಎಳೆದುಕೊಳ್ಳುತ್ತ ಎದೆಯನ್ನು ಭೂಪಾತಳಿಯಲ್ಲಿ ಹಿಗ್ಗಿಸಿ ನಿಧಾನವಾಗಿ ಗಾಳಿಯನ್ನು ಎಳೆದುಕೊಳ್ಳಿರಿ. ಉಸಿರು ಎಳೆಯುವಾಗ ನೀವು ಹೊರಗಿನ ವಿಶ್ವದ ಕಾಂತ ಶಕ್ತಿಯನ್ನು ಉಸುರಿನ ಮುಖಾಂತರ ಆರಗಿಸಿ ಕೊಳ್ಳುತ್ತಿದ್ದೀರಿ ಎಂದು ಕಲ್ಪಿಸಿಕೊಳ್ಳಿರಿ. ಉಸಿರು ಎಳೆದುಕೊಳ್ಳಲುಬೇಕಾದ ಸಮಯದ ಎರಡುಪಟ್ಟು ಸಮಯದವರೆಗೆ ಉಸಿರನ್ನು ನಿಮ್ಮ ಪುಪ್ಪಸಗಳಲ್ಲಿ ತಡೆದು ನಿಲ್ಲಿಸಿರಿ. ಹಾಗೆ ತಡೆದು ನಿಲ್ಲಿಸಿದಾಗ ನೀವು ಕಾಂತತತ್ವವನ್ನು ಆರಗಿಸಿ ಕೊಳ್ಳುತ್ತಿದ್ದೀರಿ ಎಂದು ಭಾವಿಸಿರಿ. ನಂತರ ಉಸಿರನ್ನು ನಿಧಾನವಾಗಿ ಹೊರಚೆಲ್ಲುವಾಗ ಹವೆಯಲ್ಲಿಯ ಕಾಂತ ಶಕ್ತಿಯನ್ನು ಆರಗಿಸಿಕೊಂಡಬಳಿಕ ಅದನ್ನು ಹೊರಚೆಲ್ಲುತ್ತಿದ್ದೀರಿ ಎಂದು ಭಾವಿಸಿಕೊಳ್ಳಿ. ನಿಮ್ಮ ಮೆದುಳು ಮತ್ತು ಚಿತ್ತ ಇವುಗಳು ನೀವು ಕೈಕೊಂಡಿರುವ ಕೆಲಸದಲ್ಲಿಯೇ ಪೂರ್ಣವಾಗಿ ಮಗ್ನವಾಗಿರಲಿ. ಈ ಸೂಚನೆಗಳನ್ನು ಅನುಸರಿಸುತ್ತ ಮುಂಜಾನೆ ಮೂರು ನಿಮಿಷಗಳವರೆಗೆ ಬೆಳೆಸಿರಿ. ಆಗನಿಮಗೆ ಈ ಅಭ್ಯಾಸದ ಪರಿಣಾಮವು ಗೋಚರವಾಗಿ ರುವದು. ಈ ಹಂತದಲ್ಲಿ ನಿಮ್ಮಲ್ಲಿರುವ ಕಾಂತಶಕ್ತಿಯು ಹೆಚ್ಚು ನಿಮ್ಮ ದೇಹಕ್ಕೆ ಒಂದು ವಿಲಕ್ಷಣವಾದ ಆನಂದವು ಅನುಭವವಾಗುವುದು. ಇಂಥ ಅನುಭವದೊಡನೆ ಪ್ರಾಣಾಯಾಮವನ್ನು ನಿಲ್ಲಿಸಿರಿ. ನಿಮ್ಮ ದೇಹದಲ್ಲಿ ಮಂದವಾದ ತರಂಗಗಳು ಹರಿಯುವುದನ್ನು ಅನುಭವಿಸುತ್ತೀರಿ. ಈ ಪ್ರಕಾರ ಸರ್ವಾಂಗದಲ್ಲಿ ಸಂಚಯದ ಅನುಭವವಾಗುವುದು. ಪ್ರಾಣಾಯಾಮದ ಮೂರನೆಯ ಅಥವಾ ಕೊನೆಯ ಹಂತವೆನಿಸಿದೆ. ಚಿತ್ತಸ್ಥೈರ್ಯವಿಲ್ಲದೆ ಅನೇಕ ದಿನಗಳವರೆಗೆ ಅಭ್ಯಾಸವನ್ನು ನಡೆಸಿದಾಗ್ಯೂ ಅದರಿಂದೇನೂ ಲಾಭವಿಲ್ಲ. ಚಿತ್ತಸ್ಥೈರ್ಯವೇ ಅತ್ಯಂತಮಹತ್ವದ ಸಂಗತಿ. ಪ್ರಾಣಾಯಾಮವು ದೇಹಕ್ಕೆ ಒಳ್ಳೆಯ ಟಾನಿಕ್ ಇದ್ದ ಹಾಗೆ. ಈ ಅಭ್ಯಾಸ ಮಾಡುವವರಿಗೆ ಆನೇಕ ಜನ ಸ್ನೇಹಿತರು ಅನುಯಾಯಿಗಳು ಅಗುತ್ತಾರೆ. ನೀವು ಯಾವ ಪ್ರಯತ್ನವನ್ನು ಮಾಡದೆ ಬೇರೆಯವರ ಮೇಲೆ ವರ್ಚಸ್ಸು ಬೀರಬಲ್ಲಿರಿ. ಅದು ಸಾಧ್ಯವೇ ಇಲ್ಲಿ. ಮನುಷ್ಯನಲ್ಲಿ ಯಾವು-ದಾದರೂ ಒಂದು ಬಲವು ಬೇಕೇ ಬೇಕು. ಅಂದರೇನೆ ಅವನು ಪ್ರಭಾವಿತನಾಗುವನು.

## ಪ್ರಾಣಾಯಾಮದ ಉಪಯೋಗಗಳು

೧ ದೇಹದ ರೋಗ ನಿರೋಧಕ ಶಕ್ತಿ ಬೆಳೆಯುವುದು.

೨ ತಲೆನೋವು ದೂರಾಗುವದು.

೩ ಪುಪ್ಪಸಗಳು ಬಲಗೊಳ್ಳುವವು.

೪ ಪ್ರಾಣಾಯಾಮವು ಉತ್ಕೃಷ್ಟವಾದ ತೀರ ಅಗ್ಗವಾದ, ಶೀಘ್ರವಾದ ಸುರಕ್ಷಿತವಾ ಮತ್ತು ಪರಿಣಾಮ-ಕಾರಿಯಾದ ವ್ಯಾಯಾಮ.

೫ ದೇಹದ ಅಂಗಾಂಗಳಿಗೆ ಯಾವ ತೊಂದರೆಗಳಿದ್ದರೂ ಅವುಗಳ ನಿವಾರಣೆಗೆ ಇದು ಶ್ರೇಷ್ಟ ಉಪಾಯವೆನಿಸಿದೆ.

೬ ರಕ್ತ ಶುದ್ಧಿಯನ್ನು ಮಾಡುತ್ತದೆ.

೭ ಪಚನ ಕ್ರಿಯೆಯು ಸುಧಾರಿಸುತ್ತದೆ

೮ ದಣಿದ ಮೆದುಳು ಪುನಃ ಚೇತನಗೊಳ್ಳುತ್ತದೆ.

೯ ದೇಹಶಕ್ತಿಯು ಬೆಳೆಯುತ್ತದೆ.

೧೦ ಗಾಢ ನಿದ್ದೆಗೆ ಸಹಾಯಕವಾಗುತ್ತದೆ.

೧೧ ಚಿತ್ತಸ್ಥೈರ್ಯವನ್ನು ಬೆಳೆಯಿಸುತ್ತದೆ.

೧೨ ದೇಹದಲ್ಲಿ ಉಪಯುಕ್ತ ಮತ್ತು ಸಂಚಯ ಯುಕ್ತ ಪದಾರ್ಥಗಳನ್ನು ಕಡಿಮೆ ಮಾಡುತ್ತದೆ.

೧೩ ಸ್ವಾಮಿ ವಿವೇಕಾನಂದರು ಹೇಳುವಂತೆ ಪ್ರಾಣಾಯಾಮವು ಪುಪ್ಪುಸಗಳ ಮೇಲೆ ಪುಪ್ಪುಸಗಳು ಹೃದಯದಮೇಲೆ, ಹೃದಯವು ರಕ್ತ ಸಂಚಯದಮೇಲೆ, ರಕ್ತ ಸಂಚಯುವು ಮೆದುಳಿನಮೇಲೆ, ಮೆದುಳು, ಮನಸ್ಸಿನಮೇಲೆ ಸತ್ಪರಿಣಾಮವನ್ನು ಬೀರುತ್ತವೆ. ಸಂಕಲ್ಪ ಶಕ್ತಿಯ ಬಾಹ್ಯಸುಖ ಸಂವೇದನೆಯನ್ನು ನಿರ್ಮಿಸಿದರೆ ಈ ವೇದನೆಯು ಸಂಕಲ್ಪಶಕ್ತಿಯನ್ನು ಜಾಗ್ರತಗೊಳಿಸುತ್ತದೆ.

೧೪ ಈ ಕಾಂತ ಗುಣವು ರೋಗ ಗುಣ ಪಡಿಸುವ ಶಕ್ತಿಯು ಆಗಿರುವದು.

## ಕಾಂತ ಶಕ್ತಿಯಿಂದ ರೋಗಗಳನ್ನು ಗುಣಪಡಿಸುವದು.

ವೇದನಾ ಪೂರ್ಣವಾದ ಕ್ಯಾನ್ಸರ್ ರೋಗವನ್ನೊಳಗೊಂಡು ಇನ್ನೂ ಅನೇಕ ರೋಗಗಳನ್ನು ಕಾಂತ ಶಕ್ತಿಯು ಗುಣಪಡಿಸುತ್ತದೆ ಕಾಂತಶಕ್ತಿಯ ಹಿನ್ನೆಲೆಯಲ್ಲಿರುವ ಸ್ವಸನ ಕ್ರಿಯೆಯ ವಿಚಾರಶಕ್ತಿ ಮತ್ತು ಕಾರ್ಯಶೀಲತೆಗಳು ಮಹತ್ವದ ಪರಿಣಾಮ ಗಳನ್ನುಂಟು ಮಾಡಬಹುದು. ಉಸಿರು ಮತ್ತು ಲಾಲಾರಸ ಇವುಗಳಲ್ಲಿ ಬಹಳ ಪ್ರಮಾಣದಲ್ಲಿ ಕಾಂತದ್ರವವು ಇರುವದರಿಂದ ಅದು ವೇದನಾ ನಿವಾರಣೆ ಮತ್ತು ರೋಗ ನಿವಾರಣೆ ಗುಣಪಡಿಸುವದರಲ್ಲಿ ಬಹಳ ಪರಿಣಾಮಕಾರಿ ಎನಿಸಿದೆ. ಶ್ರಿಪ್ಟಿಂಗ್ ಎಂಬವರು ರೋಗ ಗುಣಪಡಿಸಲು ರೋಗಿಯ ಹಾಸಿಗೆಯಮೇಲೆ ಉಸಿರು ಹೊರ ಹಾಕುವದು ಒಂದು ಉಪಾಯವೆಂದು ಹೇಳಿದ್ದಾರೆ. ಬಾವು, ಊತ, ಇವುಗಳಿಗೆ ಲಾಲಾರಸದ ಕಾಂತಶಕ್ತಿಯ ವಿಶೇಷ ಪರಿಣಾಮಕಾರಿಯಾದ ಕೇವಲ ಹಸ್ತಸ್ಪರ್ಶವು ಗುಣಕಾರಿಯಾಗಿದೆ. ಒಬ್ಬ ವ್ಯಕ್ತಿಯು ತನ್ನ ಕಾಂತತ್ವವನ್ನು ಬೆಳೆಸಿ ಕೊಂಡು ರೋಗಿಯೊಬ್ಬನ ಪೀಡಿತ ರೋಗದಿಂದ ಮುಕ್ತನಾಗುತ್ತಾನೆ. ಆಸ್ಟ್ರೇಲಿಯಾ

ವಿಜ್ಞಾನಿ ಕಾಂತಶಕ್ತಿಯಿಂದ ಚಿಕಿತ್ಸೆ ಮಾಡುವರು. ತಾವು ರೋಗವನ್ನು ಗುಣ ಪಡಿಸಿದ ಎಷ್ಟೋ ಅದ್ಭುತ ಉದಾಹರಣೆಗಳು ದಾಖಲ್ ಮಾಡಿದ್ದಾರೆ. ಅವರ ವೈದ್ಯಕೀಯ ವೃತ್ತಿಯಲ್ಲಿ ಕೇವಲ ಹಸ್ತಸ್ಪರ್ಶದಿಂದಲೇ ತಕ್ಷಣ ರೋಗನಿವಾರಣೆಯಾದ ಎಷ್ಟೋ ಉದಾಹರಣೆಗಳು ಇರುವವು. ಅವರು ಬ್ಯಾರಿಷ್ಟರೂ, ಕೆಲಕಾಲ ಗವರ್ನರ್ ಆಗಿ ಕೆಲಸ ಮಾಡಿದ್ದಾರೆ ಬಡವರ ಬಗೆಗೆ ಅವರಿಗೆ ಅಪಾರಕರುಣೆ ಇತ್ತು. ಶ್ರೀಮತಿ ಹ್ಯಾವಕರ್ ಎಂಬವಳು, ರೋಗಿಯೊಬ್ಬನನ್ನು ಮೂರುಸಲ ಭೇಟಿಯಾಗಿ ಎಲ್ಲ ಬಗೆಯ ಕ್ಯಾನ್ಸರ್ ಗಡ್ಡೆಗಳನ್ನು ದೇಹದ ಅಂತರ್ಗತ ಕ್ಯಾನ್ಸರ್ ರೋಗಗಳನ್ನು ಗುಣಪಡಿಸಿದ್ದಾರೆ. ದೃಷ್ಟಿ ಕಳೆದುಕೊಂಡ ರೋಗಿಯೊಬ್ಬರ ಕಣ್ಣಿನಮೇಲೆ ಕೈಯಾಡಿಸಿದ ಕೊಡಲೇ ಕಣ್ಣುಗಳಲ್ಲಿ ಕಾಂತಿತುಂಬಿ ಹೊರಜಗತ್ತಿನಲ್ಲಿ ದೃಷ್ಟಿಯುಂಟಾಯಿತು. ಹೃದಯ ಮತ್ತು ಪುಪ್ಪಸ ರೋಗಿಗಳೂ ಕೂಡಾ ಗುಣಪಟ್ಟಿದ್ದಾರೆ. ಇದು ಅಲ್ಲದೆ ಪಾರ್ಶ್ವವಾಯು, ಕಿವುಡುತನ, ಮೂಕತನ, ಇವುಕೂಡಾ ಕಾಂತಶಕ್ತಿಯಿಂದ ಗುಣ ಪಟ್ಟಿವೆ. ಈ ಶಕ್ತಿಯನ್ನು ತಮ್ಮ ಸ್ವಂತ ಕುಟುಂಬದಲ್ಲಿ ರೋಗವನ್ನು ತಡೆಯಲು ಮತ್ತು ಗುಣಪಡಿಸಲು ಉಪಯೋಗಿಸಬಹುದು. ಮನುಷ್ಯನ ದೇಹದಲ್ಲಿ ಯಾವುದೇ ಬಗೆಯ ತೊಂದರೆಯಾದ ಚಿಹ್ನೆಗಳು ಕಂಡು ಬಂದಾಗ ಕೆಲ ಕಾಲದವರೆಗೆ ಸುಮ್ಮನೆ ದೇಹದ ಮೇಲೆ ಕೈಸವರಿ ಕೆಲವು ನಿಮಿಷಗಳಲ್ಲಿ ರೋಗವನ್ನು ಗುಣ ಪಡಿಸಬಹುದು. ಸಾವಿರಾರು ಘನವಾದ ರೋಗಗಳನ್ನು ಈ ಪದ್ಧತಿಯಿಂದ ತಡೆಗಟ್ಟಬಹುದು. ಇದೊಂದು ಪ್ರಥಮೋಪಚಾರದ ಪೆಟ್ಟಿಗೆ ಇದ್ದಂತೆ. ಕಾಂತಶಕ್ತಿಯನ್ನು ದೇಹದ ಅಂತರ್ ಭಾಗಕ್ಕೂ ಮುಟ್ಟಿಸಬಹುದು. ಅದುಹೇಗೆ ? ಒಂದು ಪಾತ್ರೆ ಅಥವಾ ಬಾಟಲಿಯನ್ನು ನೀರು ತುಂಬಿ ಕೈಯಲ್ಲಿ ಹಿಡಿದುಕೊಳ್ಳಿ. ನಿಮ್ಮ ಚಿತ್ತದಲ್ಲಿಯ ಕಾಂತ ಶಕ್ತಿಯು ಅದರಲ್ಲಿ ಹರಿಯುತ್ತದೆ ಎಂದು ಕಲ್ಪನೆ. ನಿಮ್ಮ ಕಾಂತ ಶಕ್ತಿಯನ್ನು ಕೈಮುಖಾಂತರ ಕೆಲ ಕಾಲದ ವರೆಗೆ ಹರಿಯಗೊಡಿ ಪಾತ್ರೆಯಲ್ಲಿಯ ನೀರು ನಿಮ್ಮ ಕಾಂತ ಶಕ್ತಿಯ ಪ್ರಭಾವದಿಂದ ರೋಗಿಗೆ ಔಷಧಿಯಾಗುವುದು. ಒಟ್ಟಾರೆ ದೇಹದಲ್ಲಿ ಕಾಂತಶಕ್ತಿಯ ಕೊರತೆಯಿಂದಾಗಿ ರೋಗದ ಬಾಧೆಗಳು ಉಂಟಾಗುವವು. ಚಿಕ್ಕ ಪುಟ್ಟ ರೋಗಗಳು ಎರಡು ಮೂರು ಸಲದ ಪ್ರಯೋಗದಿಂದ ಗುಣವಾಗುತ್ತವೆ. ಒಂದು ಸಲ ಐದುನಿಮಿಷದವರೆಗೆ ಉಪಚಾರ ಮಾಡಬಹುದು. ರೋಗವು ಗಂಭೀರ ಸ್ವರೂಪದ್ದಾಗಿದ್ದರೆ ಈ ಪ್ರಯೋಗವನ್ನು ಹೆಚ್ಚು ಸಲ ಮತ್ತು ಮೇಲಿಂದ ಮೇಲೆ ನಡೆಸಬೇಕಾಗಬಹುದು.

(ವೈದಿಕರೀತಿಯು ಜಂಗಮರ ಪಾದಪೂಜೆ ಪಾದೋದಕವನ್ನು ಸೇವಿಸುವುದು ಎಷ್ಟೋ ಕಾಲಗಳಿಂದ ನಮ್ಮಲ್ಲಿ ನಡೆದು ಬಂದಿದೆ ಅದರ ಮಹತ್ವ ಗುರುಸೇವೆಯಲ್ಲಿದ್ದ ವರಿಗೆ ಮಾತ್ರ ಗೊತ್ತಾಗುವುದು.) ○

“ ಮಾಟಕೂಟ ” ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ " ಮಾಡಿದೆ " ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಕ್ಷೇತ್ರ ವಾರ್ತೆ

-ಹೆಚ್. ಬಿ. ಗಂಗಾಧರಯ್ಯ

## ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಮಹಾಪಾಠಶಾಲೆಯ 76 ನೆಯ ಸಂಸ್ಕೃತೋತ್ಸವದ ಅಂಗವಾಗಿ

## "ಕಾಳಿದಾಸ ಸಪ್ತಾಹ"

ಸಂಸ್ಕೃತೋತ್ಸವದ ಅಂಗವಾಗಿ ದಿನಾಂಕ 14-12-92ರಿಂದ 20-12-92 ರವರೆಗೆ ಕಾಳಿದಾಸ ಮಹಾಕವಿಯ "ರಘುವಂಶ ಮಹಾಕಾವ್ಯದ"ಬಗ್ಗೆ ಒಂದು ವಾರಗಳ ಕಾಲ ಮಹಾ ಕಾವ್ಯದ ಸಮಗ್ರ ಚಿಂತನೆಯ ಕಾರ್ಯ ಕ್ರಮವನ್ನು ವ್ಯವಸ್ಥೆ ಮಾಡಲಾಗಿತ್ತು. ಎಲ್ಲ ಕಾರ್ಯಕ್ರಮಗಳು ಪೂಜ್ಯ ಶ್ರೀ ಶ್ರೀಗಳವರ ದಿವ್ಯನೇತೃತ್ವದಲ್ಲಿ ಸಾಂಗವಾಗಿ ಜರುಗಿದವು. ತಾ 14-12-92ರಂದು ಸಂಜೆ 6 ಘಂಟೆಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಜ್ಯೋತಿ ಬೆಳಗಿಸುವ ಮೂಲಕ ಸಪ್ತಾಹವನ್ನು ಉದ್ಘಾಟನೆ ಮಾಡಿದರು. ಸಂಸ್ಕೃತ ಸಂಸ್ಕೃತಿ ಸಂಪನ್ನಭಾಷೆ, ಕಾಳಿದಾಸ ಮಹಾ ಕವಿಯಿಂದ ಸಂಸ್ಕೃತ ಜಗದ್ವ್ಯಾಪಿಯಾಗಲು ಅವಕಾಶವಾಯಿತು. ಸಂಸ್ಕೃತ ಭಾರತೀಯ ಭಾಷೆಗಳಿಗೆ ಮಾತೃಸ್ಥಾನೀಯವಾಗಿದೆ. ಸಂಸ್ಕೃತ ಸಾಹಿತ್ಯದಿಂದ ಭಾರತದ ಹಿರಿಮೆ ಹೆಚ್ಚಿತು "ಎಂದು ಉದ್ಘಾಟನಾ ಭಾಷಣದಲ್ಲಿ ತಿಳಿಸಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಸಾ.ಶಿ. ಇಲಾಖಾ ಸಹನಿರ್ದೇಶಕರಾದ ಶ್ರೀ ಎಂ.ಇ. ಶಿವಲಿಂಗ ಮೂರ್ತಿ ಯವರು" ಇಂಗ್ಲೀಷನಲ್ಲಿ ಶೇಕ್ಸಪಿಯರ್ ಪ್ರಸಿದ್ಧ ನಾಟಕಕಾರನಂತೆ ಸಂಸ್ಕೃತದಲ್ಲಿ ಕಾಳಿದಾಸ ಶ್ರೇಷ್ಠ ಮಟ್ಟದ ನಾಟಕಕಾರ ಮತ್ತು ಮಹಾಕವಿ. ಅವನ ಕಾವ್ಯದಲ್ಲಿ ಬರುವ ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಂಡು ವಿದ್ಯಾರ್ಥಿಗಳು ತಮ್ಮ ಜೀವನ ಸಾರ್ಥಕಪಡಿಸಿಕೊಳ್ಳಬೇಕೆಂದರು. "ಉಪಮಾ ಕಾಳಿದಾಸಸ್ಯ" ಅಂದರೆ 'ಕಾಳಿ ದಾಸನ ಉಪಮೆ' ಎಂಬ ವಿಷಯದ ಬಗ್ಗೆ ಪ್ರಸಿದ್ಧ ವಿದ್ವಾಂಸರಾದ ವಿದ್ವಾನ್ ಶ್ರೀ ಶೇಷಾಚಲ ಶರ್ಮರವರು ಕವಿಕುಲಗುರು ಕಾಳಿದಾಸನ ಕಾವ್ಯ ಉಪಮಾಲಂಕಾರದ ಔಚಿತ್ಯ ಸ್ವಾರಸ್ಯವನ್ನು "ವಾಗರ್ಥಾವಿವ ಸಂಪೃಕ್ತೌ' ಮುಂತಾದ ಶ್ಲೋಕಗಳನ್ನು ಉದಾಹರಿಸಿದರು. ಅವರು ಮಾತನಾಡುತ್ತಾ ಕಾಳಿದಾಸನ ಸ್ಥಾನ ಜಗತ್ತಿನಲ್ಲಿ ಹಿರಿದು ಜಗತ್ಪಸಿದ್ಧ 12ಮಂದಿ ಮಹಾಕವಿಗಳಲ್ಲಿ ಕಾಳಿದಾಸ ಒಬ್ಬ. ಅವನ ಕಾವ್ಯ ಪ್ರತಿಭೆ ಪ್ರಶಂಸಾರ್ಹವಾದುದು ಎಂದರು.

ದಿ. 15-12-92ರಿಂದ ಪ್ರತಿನಿತ್ಯ ಮಧ್ಯಾಹ್ನ 2-30ಘಂಟೆಗೆ ಚಿಂತನಗೋಷ್ಠಿ ನಡೆಯಿತು. ಅಂದು ಬೆಂಗಳೂರಿನ ಡಾ|| ಶ್ರೀಮತಿ ಎಸ್. ಆರ್. ಲೀಲಾರವರು 'ಕಾಳಿದಾಸನ ಸ್ತ್ರೀಪಾತ್ರಚಿತ್ರಣದ ಬಗ್ಗೆ ಉಪನ್ಯಾಸ ನೀಡಿದರು. ದಿ. 16-12-92 ಬೆಂಗಳೂರಿನ ವಿದ್ವಾನ್ ಶ್ರೀ ಹ.ವೆಂ. ನಾರಾಯಣ ಶಾಸ್ತ್ರಿಗಳು "ಪ್ರಕೃತಿ ವರ್ಣನೆ"

ಯಬಗ್ಗೆ, 17.12-92 ರಂದು ವಿದುಷಿ ಶ್ರೀಮತಿ ವಿ.ಎನ್ ಇಂದಿರಮ್ಮ ಬೆಂಗಳೂರು ಇವರು "ಕಾಳಿದಾಸನ ಕಲ್ಪನಾ ವೈಭವ" ವಿಷಯದಬಗ್ಗೆ, ದಿ. 18-12-92ರಂದು ಸಿದ್ಧಗಂಗಾ ಸಂಸ್ಕೃತಕಾಲೇಜಿನ ನಿವೃತ್ತ ವಿದ್ವಾಂಸರಾದ ವಿದ್ವಾನ್ ಶ್ರೀ ಎಂ.ಎಲ್. ಲಕ್ಷ್ಮೀನರಸಿಂಹಭಟ್ಟರು ಧಾರ್ಮಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳಬಗ್ಗೆ, 19-12-92 ರಂದು ಇದೇ ಸಂಸ್ಕೃತ ಕಾಲೇಜಿನ ವಿದ್ವಾನ್ ಶ್ರೀ ಸೊ. ನರಸಿಂಹರವರು 'ಜೀವನ ಮೌಲ್ಯಗಳು' ಎಂಬ ವಿಷಯದ ಬಗ್ಗೆ, ದಿ.20-12-92ರಂದು ವಿದ್ವಾನ್ ಶ್ರೀ ಶೇಷಾಚಲ ಶರ್ಮರವರು ಕಥಾಸಂವಿಧಾನ ಹಾಗೂ ಪದ್ಯ ಕಾವ್ಯಗಳಲ್ಲಿ ರಘುವಂಶದ ಸ್ಥಾನ ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದರು. ಅಂದಿನ ಸಭೆಯ ಅಧ್ಯಕ್ಷತೆಯನ್ನು ಗೋಕರ್ಣ ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಶ್ರೀ ಸಾಂಬದೀಕ್ಷಿತರು ವಹಿಸಿದ್ದರು. ಅಂದು ಸಾಯಂಕಾಲ 6 ಘಂಟೆಗೆ ಸಪ್ತಾಹದ ಮುಕ್ತಾಯ ಸಮಾರಂಭ ನೆರವೇರಿತು. ಸಮಾರಂಭದ ದಿವ್ಯನೇತೃತ್ವ ವಹಿಸಿ ಪರಮಪೂಜ್ಯ ಶ್ರೀ ಶ್ರೀ ಗಳವರು "ಕಾಳಿದಾಸನ ವಿದ್ಯೆ, ವಿನಯ, ಸೌಶೀಲಗಳು ಎಲ್ಲ ಕಾಲಕ್ಕೂ ಬೇಕಾದವುಗಳು. ಭಾರತೀಯತ್ವವನ್ನೇ ಮೈಗೂಡಿಸಿಕೊಂಡ ಮಹಾ ಕವಿಯಂತವನನ್ನು ಪಡೆದ ಭಾರತ ಧನ್ಯವಾಗಿದೆ. ಕಾಳಿ ದಾಸನ ಕಾಲದ ಜನಸಂಖ್ಯೆಗೆ ಒಬ್ಬ ಕಾಳಿದಾಸನಿದ್ದ, ಇವತ್ತಿನ ಜನಸಂಖ್ಯೆಗೆ ಒಬ್ಬ ಕಾಳಿದಾಸನೂಇಲ್ಲ" ಎಂದರು. ಅಧ್ಯಕ್ಷತೆ ವಹಿಸಿದ್ದ ಬೆಂಗಳೂರು ಪ್ರಸಿದ್ಧ ಕಂಟ್ರಾಕ್ಟರ್ ವಿದ್ಯಾಭಿಮಾನಿ ಮತ್ತು ಉದಾರ ಕೊಡುಗೈ ದಾನಿಯಾದ ಶ್ರೀ ಎಂ.ಎಸ್. ರಾಮಯ್ಯ ನವರ ಮಕ್ಕಳಾದ ಶ್ರೀ ಜಯರಾಂರವರು ಮಾತನಾಡುತ್ತಾ ನಮ್ಮ ದೇಶದ ಧರ್ಮ, ಸಂಸ್ಕೃತಿ ಮತ್ತು ಸನಾತನ ಪರಂಪರೆಗೆ ಆಶ್ರಯವಾದ ಸಂಸ್ಕೃತಭಾಷೆ ಉಳಿದು ಬರಬೇಕು. ಇಂದು ಆ ಕಾರ್ಯದಲ್ಲಿ ಶ್ರೀ ಸಿದ್ಧಗಂಗಾಮಠದ ಶ್ರೀ ಶ್ರೀ ಗಳವರು ಸತತ ಶ್ರಮವಹಿಸುತ್ತಿದ್ದಾರೆ. 5000 ಮಂದಿ ವಿದ್ಯಾರ್ಥಿಗಳಿಗೆ ಆಶ್ರಯನೀಡಿ ಸಂಸ್ಕೃತಾ ಧ್ಯಯನಕ್ಕೆ ಅವಕಾಶನೀಡಿ ಸಂಸ್ಕೃತಿ ಸಂಪನ್ನರನ್ನಾಗಿ ರೂಪುಗೊಳಿಸುತ್ತಿದ್ದಾರೆ. ಅವರ ತಪಃಫಲವನ್ನು ನಾಡಿಗೆ ಧಾರೆಯರೆಯುತ್ತಿದ್ದಾರೆ. ಶ್ರೀರಾಮನಂತಹ ಆದರ್ಶ ವ್ಯಕ್ತಿಗಳನ್ನು ತಯಾರು ಮಾಡುವ ಕೇಂದ್ರಸ್ಥಾನ ಶ್ರೀ ಸಿದ್ಧಗಂಗಾ ಮಠ ಎಂದರು.

ಮುಖ್ಯ ಅತಿಥಿಯಾಗಿ ಮಾತನಾಡಿದ ಶ್ರೀ ಶೇಷಾಚಲಶರ್ಮರವರು, ಸಂಸ್ಕೃತ ಭಾಷೆ ಮನುಕುಲಕ್ಕೆ ಅತಿ ಉಪಯುಕ್ತ ಜೀವನ ಮೌಲ್ಯಗಳನ್ನು ಕೊಟ್ಟಿದೆ. ಪೂಜ್ಯ ಶ್ರೀ ಶ್ರೀ ಗಳವರ ಕೃಪಾಶ್ರಯದಲ್ಲಿ ನಡೆಯುತ್ತಿರುವ "ಕಾಳಿದಾಸ ಸಪ್ತಾಹ" ನನ್ನ ಜೀವಿತ ಕಾಲದಲ್ಲಿಯೇ ಮೊದಲನೆಯದು. ಇದುವರೆವಿಗೂ ಯಾರೂ ಮಾಡದ ಸಪ್ತಾಹ ಕಾರ್ಯ ಸಿದ್ಧಗಂಗೆಯಲ್ಲಿ ನಡೆದಿದೆ. ಬದುಕಿಗೆ ಬೇಕಾದ ಅಮೂಲ್ಯ ಜ್ಞಾನ ಸಂಪತ್ತು ಕಾಳಿದಾಸನ ಕಾವ್ಯದಲ್ಲಿ ಸಿಗುತ್ತವೆ. ವರತಂತು ಮಹರ್ಷಿಯ ಶಿಷ್ಯನಾದ ಕೌತ್ಸನು ಕೊಟ್ಟ ಗುರುದಕ್ಷಿಣೆಯ ಪ್ರಸಂಗವನ್ನು ಹೇಳುತ್ತಾ ಶ್ರೀ ಎಂ.ಎಸ್. ರಾಮಯ್ಯನವರ ಮಕ್ಕಳಾದ ಶ್ರೀ ಜಯರಾಮರವರು ಶ್ರಿ ಸಿದ್ಧಗಂಗಾಮಠದ ಮುಖ್ಯದ್ವಾರ ಒಂದಕ್ಕೆ

ಮಹಾದ್ವಾರವನ್ನು ಸ್ವಂತ ಖರ್ಚಿನಿಂದ ಅದಕ್ಕೆ ತಗುಲುವ ಪೂರ್ಣ ಹಣವನ್ನು ವಿನಿಯೋಗಿಸಿ ಸರ್ವಾಂಗ ಸುಂದರವಾಗಿ ನಿರ್ಮಿಸಲು ಮುಂದೆ ಬಂದಿರುವುದು ಅವರ ಉದಾರಕೊಡುಗೆಯನ್ನು ಸೂಚಿಸುತ್ತದೆ. ದಾನಶೀಲತೆ ನಮ್ಮ ಸಂಸ್ಕೃತಿಯ ಸಾರ ಎಂದು ಹೇಳಿದರು. ಇದೇ ಸಂದರ್ಭದಲ್ಲಿ ಅಖಿಲ ಕರ್ನಾಟಕ ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರ ಸಂಘದ ವತಿಯಿಂದ ಗೋಕರ್ಣ ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಂಶುಪಾಲರೂ, ಪ್ರಾಂಶುಪಾಲರ ಸಂಘದ ಉಪಾಧ್ಯಕ್ಷರೂ ಆದ ವಿದ್ವಾನ್ ಶ್ರೀ ಸಾಂಬದೀಕ್ಷಿತರಿಗೆ ಸಭೆಯಲ್ಲಿ ಸನ್ಮಾನಿಸಲಾಯಿತು. ಸನ್ಮಾನಿತರು ಮಾತನಾಡಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಒಂದು ಮಹಾವಟವೃಕ್ಷ. ಆದರ ಅಡಿಯಲ್ಲಿ ವೃಕ್ಷದಲ್ಲಿ ಅನೇಕ ವಿಧವಾದ, ಅನೇಕ ತರವಾದ ಜೀವಿಗಳಿಗೆ ಆಶ್ರಯ ದೊರೆತಂತೆ 5000 ಸಹಸ್ರ ಮಕ್ಕಳಿಗೆ ಪೂಜ್ಯರು ಆಶ್ರಯದಾತರಾಗಿ ಮಕ್ಕಳನ್ನು ಸದ್ ವ್ಯಕ್ತಿ-ಗಳನ್ನಾಗಿ ರೂಪುಗೊಳಿಸುತ್ತಿದ್ದಾರೆ ಎಂದು ಮುಕ್ತಕಠದಿಂದ ಪ್ರಶಂಸಿಸಿದರು. ಸಭೆಯು ಮಂಗಳದೊಂದಿಗೆ ಮುಕ್ತಾಯವಾಯಿತು.

---

## ಶ್ರೀ ಸಿದ್ಧಗಂಗಾಮಠಕ್ಕೆ ಮಹಾದ್ವಾರ-ಗೋಪುರ ನಿರ್ಮಾಣ

ಶ್ರೀ ಮಠಕ್ಕೆ ಪ್ರವೇಶಿಸುವ ರಾಷ್ಟ್ರೀಯ ಹೆದ್ದಾರಿ ನಂ-4 (ಬೆಂಗಳೂರು-ಹೊನ್ನಾವರ) ಕ್ಯಾತ್ಸಂದ್ರ ಸಮೀಪ ಭವ್ಯವಾದ ಮಹಾದ್ವಾರ-ಗೋಪುರ ನಿರ್ಮಾಣವಾಗಲಿದೆ. ಬೆಂಗಳೂರಿನ ಸುಪ್ರಸಿದ್ಧ ಕಂಟ್ರಾಕ್ಟರ್, ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಗಣನೀಯವಾದ ಸೇವೆ ಸಲ್ಲಿಸಿ ಕರ್ನಾಟಕದಲ್ಲಿ **ಪ್ರಖ್ಯಾತಿಗಳಿಸಿರುವ** ಸನ್ಮಾನ್ಯ ಶ್ರೀ ಎಂ. ಎಸ್. ರಾಮಯ್ಯನವರು ಮತ್ತು ಮಕ್ಕಳು ಸ್ಮರಣೀಯವಾದ ಮಹಾಗೋಪುರವನ್ನು ಕಟ್ಟಿಸಿಕೊಡಲಿದ್ದಾರೆ. ಶ್ರೀ ಶ್ರೀ ಗಳವರ ವಜ್ರಮಹೋತ್ಸವ ವೇಳೆಗೆ ನಿರ್ಮಾಣವಾಗಲಿದೆ.

ಮಾನ್ಯ ಶ್ರೀ ರಾಮಯ್ಯನವರ ಮಕ್ಕಳಾದ ಶ್ರೀಯುತ ಜಯರಾಂ ಅವರು ಈ ದಿಶೆಯಲ್ಲಿ ಕಾರ್ಯಪ್ರವೃತ್ತರಾಗಲು ಶ್ರೀ ಮಠಕ್ಕೆ 20-12-92 ರಂದು ಆಗಮಿಸಿ ಪೂಜ್ಯ ಶ್ರೀ ಶ್ರೀ ಗಳವರೊಡನೆ ಸಮಾಲೋಚಿಸಿ ಆಶೀರ್ವಾದವನ್ನು ಪಡೆದರು

---

## ಸನಿವಾಸ ಶಿಕ್ಷಣ ಸಂಸ್ಥೆಗಳ ವಾರ್ಷಿಕ ಕ್ರೀಡಾ ಕೂಟ

ಶ್ರೀ ಮಠದ ಸನಿವಾಸ ವಿದ್ಯಾ ಸಂಸ್ಥೆಗಳ ವಾರ್ಷಿಕ ಕ್ರೀಡಾಕೂಟವು 26-12-92 ಕಿರಿಯ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ನಡೆಯಿತು. ಶ್ರೀ ಶ್ರೀ ಗಳವರು ಈ ಸಂದರ್ಭದಲ್ಲಿ ಮಾತನಾಡುತ್ತಾ ಶಿಕ್ಷಣದ ಗುರಿ ವಿದ್ಯಾರ್ಥಿಗಳ ಪರಿಪೂರ್ಣ ಬೆಳವಣಿಗೆ. ಅವುಗಳೆಂದರೆ ದೈಹಿಕ, ಮಾನಸಿಕ, ಆಧ್ಯಾತ್ಮಿಕ, ನೈತಿಕಶಕ್ತಿಗಳು. ಆರೋಗ್ಯ ಮತ್ತು ಶರೀರ ಬೆಳವಣಿಗೆ ವ್ಯಕ್ತಿಯ ಜೀವಿತ ಕಾಲದಲ್ಲಿ

ಮಹತ್ವದ ಪಾತ್ರ ವಹಿಸುತ್ತದೆ, "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂದು "ಕಾಳಿದಾಸ" ಹೇಳಿರುತ್ತಾನೆ. ಆಟ ಮತ್ತು ಕ್ರೀಡೆಗಳು ಉತ್ತಮ ಆರೋಗ್ಯ ನಿರ್ವಹಣೆಗೆ ಸಹಕಾರಿಯಾಗುತ್ತವೆ. ವಿದ್ಯಾರ್ಥಿಗಳು ಕ್ರೀಡಾ ಮನೋಭಾವ ಬೆಳಸಿಕೊಳ್ಳಬೇಕೆಂದರು.

ಅಧ್ಯಕ್ಷತೆ ವಹಿಸಿ ಮಾತನಾಡಿದ ಸ. ಶಿ. ಇ. ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಎಸ್. ಎನ್. ರಂಗೇಗೌಡರು ಬಾರ್ಸಿಲೋನದಲ್ಲಿ ನಡೆದ ಒಲಂಪಿಕ್ಸ್ ಕ್ರೀಡೆಗಳಲ್ಲಿ ನಮ್ಮ ಭಾರತ ಕ್ರೀಡಾಪಟುಗಳ ಕೆಳದರ್ಜೆ ಕ್ರೀಡಾಮಟ್ಟ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಕುಸಿದು ಹೋಯಿತು. ಯುವಕ ವಿದ್ಯಾರ್ಥಿಗಳು ಈಬಗ್ಗೆ ಚಿಂತಿಸಿ ಶ್ರದ್ಧೆ ಮತ್ತು ಸತತ ಅಭ್ಯಾಸದಿಂದ ಆಟ ಮತ್ತು ಕ್ರೀಡೆಗಳಲ್ಲಿ ಮೇಲ್ಮೆ ಸಾಧಿಸಬೇಕೆಂದರು. ಇವುಗಳಿಂದ ಧೈರ್ಯ, ಸಾಹಸ, ಸಮಾನತೆ, ನಿಯಮ ಪಾಲನೆ, ಸಹಕಾರ ಮತ್ತು ಸ್ನೇಹ ನಡವಳಿಕೆ ಮುಂತಾದ ಸದ್ಗುಣಗಳು ಬೆಳವಣಿಗೆಯಾಗುತ್ತವೆ. ರಾಷ್ಟ್ರೀಯ ಏಕತೆಗೆ ಕ್ರೀಡೆಗಳ ಪಾತ್ರ ಮಹತ್ವ ನೀಡುತ್ತಿವೆ ಎಂದರು.

ಕ್ರೀಡಾಕೂಟವನ್ನು ಉದ್ಘಾಟಿಸಿದ ಸಾ.ಶಿ.ಇ ದೈಹಿಕ ಶಿಕ್ಷಣ ವಿಭಾಗದ ಶ್ರೀ ಟಿ.ಎಲ್. ಸಿದ್ಧರಾಮಯ್ಯನವರು ಮಾತನಾಡಿ ಶ್ರೀ ಮಠವು ರಾಜ್ಯದಲ್ಲಿ ಬೃಹತ್ ವಿದ್ಯಾಕೇಂದ್ರವಾಗಿ 5000 ವಿದ್ಯಾರ್ಥಿಗಳು ಪೂಜ್ಯ ಶ್ರೀ ಶ್ರೀ ಗಳವರ ಸೇವಾ ಮಹಿಮೆಯಲ್ಲಿ ಆಶ್ರಯ ಪಡೆದಿದ್ದಾರೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿರುವ ವಿದ್ಯಾರ್ಥಿಗಳಿಗೆ ಇಲ್ಲಿ ಒಂದು ಕ್ರೀಡಾಂಗಣದ ಅವಶ್ಯಕತೆ ಇದೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕ್ರೀಡಾ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ಕೊಡುತ್ತಿವೆ. ಕ್ರೀಡೆಗಳಲ್ಲಿ ಮುನ್ನಡೆ ಸಾಧಿಸಿರುವ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ವಿಶೇಷ ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತಿದೆ. ಈ ಎಲ್ಲ ಸೌಲಭ್ಯಗಳನ್ನು ದೊರಕಿಸಿಕೊಳ್ಳಲು ಶ್ರೀ ಮಠದ ಆಡಳಿತ ಮಂಡಳಿ ಮುಂದಾಗಬೇಕೆಂದರು.

ಸಮಾರಂಭದಲ್ಲಿ ತುಮಕೂರು ಜಿಲ್ಲಾ ದೈಹಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಎಂ. ರಾಮಯ್ಯನವರು ಧ್ವಜಾರೋಹಣ ಮತ್ತು ವಂದನಾಸ್ವೀಕಾರ ಮಾಡಿ ರಾಜ್ಯಮಟ್ಟದಲ್ಲಿ ಶ್ರೀ ಮಠದ ಶಾಲಾ ವಿದ್ಯಾರ್ಥಿಗಳು ಹಾಕಿ ಮತ್ತು ಕುಸ್ತಿ ಪಂದ್ಯಗಳಲ್ಲಿ ಆಯ್ಕೆಯಾಗಿ ಮುನ್ನಡೆದಿರುವುದು ಸಂತೋಷದ ಸಂಗತಿ. ಆಟ ಮತ್ತು ಕ್ರೀಡೆಗಳಿಂದ ಇತರೆ ಅನೇಕ ಉತ್ತಮ ಸಾಮಾಜಿಕ ಗುಣಗಳು ಬೆಳವಣಿಗೆಯಾಗುತ್ತವೆ. ವಿದ್ಯಾರ್ಥಿಗಳು ಆಸಕ್ತಿಯಿಂದ ಭಾಗವಹಿಸಬೇಕೆಂದರು.

ಶ್ರೀ ಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ. ಎಸ್. ಪುಟ್ಟಶಂಕರಯ್ಯನವರು ಮುಖ್ಯ ಅತಿಥಿಯಾಗಿ ಮಾತನಾಡಿ ಆಟ ಮತ್ತು ಕ್ರೀಡೆಗಳಲ್ಲಿ ಸೋಲು ಮತ್ತು ಗೆಲವು ಮುಖ್ಯವಲ್ಲ. ಉತ್ಸಾಹದಿಂದ ಭಾಗವಹಿಸಬೇಕೆಂದರು.

ಕಾಲದ ಸದ್ವಿನಿಯೋಗಕ್ಕೆ ಕ್ರೀಡೆಗಳು ಮಹತ್ತರ ಪಾತ್ರವಹಿಸುತ್ತವೆ. ಶ್ರೀ ಮಠದಲ್ಲಿ ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಕ್ರೀಡಾಂಗಣ ನಿರ್ಮಿಸಲು ನೀಡಿದ ಸಲಹೆಗಳನ್ನು ಕಾರ್ಯ ರೂಪಕ್ಕೆ ತರಲು ಪ್ರಯತ್ನಿಸಲಾಗುವುದೆಂದು ಹೇಳಿದರು.

ಪ್ರಾರಂಭದಲ್ಲಿ ಶ್ರೀ ಪಿ. ಎಸ್. ಸೋಮಶೇಖರ್ ಸ್ವಾಗತ ಕೋರಿದರು. ಶ್ರೀ ಮಲ್ಲಿಕಾರ್ಜುನಯ್ಯ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಡಿ. ನಾಗರಾಜ್ ವಂದನೆ ಸಲ್ಲಿಸಿದರು.

---

## ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ-1993

ಮಹಾಶಿವರಾತ್ರಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯವರ ಜಾತ್ರೆ ಅಂಗವಾಗಿ ಫೆಬ್ರವರಿ-1993 ಎರಡನೇ ವಾರದಿಂದ ಪ್ರಾರಂಭವಾಗುವ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಪೂರ್ವ ಸಿದ್ಧತಾ ಸಭೆ 28-12-92 ಶ್ರೀ ಮಠದಲ್ಲಿ ಸಮಾವೇಶ ವಾಗಿತ್ತು.

ತುಮಕೂರು ಜಿಲ್ಲಾಪರಿಷತ್ ಕಾರ್ಯದರ್ಶಿಗಳಾದ ಶ್ರೀಮತಿ ಅಮಿತಾಪ್ರಸಾದ್ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲೆಯ ವಿವಿಧ ಇಲಾಖೆಗಳ ಮುಖ್ಯಾಧಿಕಾರಿಗಳು ಸಭೆಯಲ್ಲಿ ಪಾಲ್ಗೊಂಡಿದ್ದರು. ಸಭೆಯನ್ನುದ್ದೇಶಿಸಿ ಶ್ರೀಮತಿಯವರು ಮಾತನಾಡಿ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾ. ಸ್ವಾಮಿಗಳವರ ಸೇವಾ ಕ್ಷೇತ್ರದಲ್ಲಿ ಏರ್ಪಡಿಸಿರುವ ವಸ್ತುಪ್ರದರ್ಶನ ಲಕ್ಷಾಂತರ ರೈತ ಬಾಂಧವರಿಗೆ ಮತ್ತು ಯಾತ್ರಾರ್ಥಿಗಳಿಗೆ ಜ್ಞಾನ ಕೇಂದ್ರವಾಗಿ 30 ವರ್ಷಗಳಿಂದ ಮುನ್ನಡೆಯುತ್ತಿರುವುದು ಶ್ಲಾಘನೀಯವಾಗಿದೆ ಬೋಧಪ್ರದವಾಗಿ ನೂತನ ದೃಷ್ಟಿಯಲ್ಲಿ ತಿಳಿವಳಿಕೆ ನೀಡುವಂತೆ ಮಳಿಗೆಗಳನ್ನು ವ್ಯವಸ್ಥೆಗೊಳಿಸಬೇಕೆಂದು ಇಲಾಖೆಗಳ ಅಧಿಕಾರಿಗಳಲ್ಲಿ ಮನವಿ ಮಾಡಿಕೊಂಡರು.

ವಸ್ತು ಪ್ರದರ್ಶನ ಕಾರ್ಯದರ್ಶಿ ಶ್ರೀ ಬಿ. ಗಂಗಾಧರಯ್ಯನವರು ಕಳೆದ 1992ನೆ ವರ್ಷದ ವರದಿಯನ್ನು ಸಭೆಯ ಮುಂದೆ ಇಟ್ಟು ಎಲ್ಲಾ ಇಲಾಖೆಗಳ ಮುಖ್ಯಾಧಿಕಾರಿಗಳು 1993ನೇ ವಸ್ತು ಪ್ರದರ್ಶನದಲ್ಲಿ ಬದಲಾವಣೆ ಹೊಂದುತ್ತಿರುವ ನೂತನ ಸಮಾಜ ಜೀವನಕ್ಕೆ ತಕ್ಕಂತೆ ಮಳಿಗೆಗಳನ್ನು ತೆರೆದು ಜನತೆಗೆ ಸೂಕ್ತ ತಿಳಿವಳಿಕೆ ನೀಡಬೇಕೆಂದು ವಿನಂತಿಸಿಕೊಂಡರು.

"SIDDAGANGA" MONTHLY Reg. No. KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ, 57210